ಶ್ರೀ ಪ್ರಸನ್ನ ವೆಂಕಟದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ

ಸಂಪುಟ – 3

ಶ್ರೀ ಪ್ರಸನ್ನ ವೆಂಕಟದಾಸಾರ್ಯ ವಿರಚಿತ

# "ನಾರಾಯಣ ಪಂಜರ"

(ಸಂದರ್ಭ ಸಹಿತ ಅರ್ಥ ವಿವರಣೆ)







ಶ್ರೀನಿವಾಸ ಸು. ಮಠದ



ಶ್ರೀ ಪ್ರಸನ್ನ ವೆಂಕಟದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ
ಸಂಪುಟ – 3

ಶ್ರೀ ಪ್ರಸನ್ನವೆಂಕಟದಾಸಾರ್ಯ ವಿರಚಿತ

# "ನಾರಾಯಣ ಪಂಜರ"

(ಸಂದರ್ಭ ಸಹಿತ ಅರ್ಥ ವಿವರಣೆ)

ಲೇಖಕರು
ವಿದ್ವಾನ್ ಶ್ರೀನಿವಾಸ ಸು. ಮಠದ



ಶ್ರೀ ಪ್ರಸನ್ನ ವೆಂಕಟ ಪ್ರಕಾಶನ
# 15, "ಮಂತ್ರಾಲಯ" (ಪ್ರಶಾಂತಿ ನಗರ), 9ನೇ "ಬಿ" ಮುಖ್ಯರಸ್ತೆ
17ನೇ ಅಡ್ಡರಸ್ತೆ, ಇಸ್ರೋ ಲೇಔಟ್, ಬೆಂಗಳೂರು – 560078
ದೂರವಾಣಿ : 080–26665398, ಮೊಬೈಲ್ : 9448011954
Email : rsk9651@yahoo.com/subhasbk@gmail.com
trust@prasannavenkatadasaru.org
website : www.prasannavenkatadasaru.org

SRI PRASANNAVENKATADASARYA VIRACHITA
NARAYANA PANJARA - SANDARBHA SAHITA ARTHA VIVARANE
SRI PRASANNA VENKATA DAASARA SAMAGRA KRITIGALALLIYA
AADHYATMIKA VALANOTA SAMPUTA - 3

*Written By :* **Srinivas. S. Mathad**
Recipient of "Parimala Prashasti', Jnanajyoti Award and
"Haridasa Seva Praveena".

*Published by :* **Sri Prasanna Venkata Publications**
No. 15, "Mantralaya" (Prashantinagar)
9th 'B' Main Road, 17th Cross
ISRO Layout Bangalore - 560078

| | | |
|---|---|---|
| Copy right | : | Author |
| First Impression | : | 2012 |
| Copies | : | 1,000 |
| Pages | : | xii + 84 = 96 |
| Price | : | |
| Used Paper | : | 70 GSM Maplitho |
| Cover Page | : | V.Raj |

*Copies Available at :*

1. Shrimati : REKHA KAKHANDAKI
   No15, 'Mantralaya' Prashantinagar
   9th 'B' Main Road, 17th Cross
   ISRO Layout Bangalore - 560078
   Phone : 080-26665398 Mob : 9448011954
   Email : rsk9651@yahoo.com/subhasbk@gmail.com
   trust@prasannavenkatadasaru.org
2. Dhruvacharya. kakhandaki
   No. 35; 'C' Block, Sector - 3
   Navangar Bagalkot
3. Minneopolis USA :
   Contact : Shilpa.kedar@yahoo.com

ಮುದ್ರಣ :



ವಿಶ್ವಾಸ್ ಪ್ರಿಂಟ್ಸ್
VISHWAS PRINTS
23, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835

# ಸಮರ್ಪಣೆ

ಪ್ರಸನ್ನ ಚಾರಿತ್ರ ಪ್ರಸನ್ನ ಶೋಭನ ವಕ್ತ್ರ ಪ್ರಸನ್ನಾ ಪಾಂಗನೇತ್ರ ಪ್ರಸನ್ನಗಾತ್ರ ॥
ಪ್ರಸನ್ನ ವೆಂಕಟಕೃಷ್ಣ ಪ್ರಸನ್ನನಾದರೆ ನಿತ್ಯ ಪ್ರಸನ್ನತರೋಕ್ತಿ ಬಾಹೊವು ಭಕ್ತಜನಕೆ ॥

॥ ಪ್ರಸನ್ನ ವರದಂ ಧ್ಯಾಯೇತ್ । ಪ್ರಸನ್ನ ಗುಣಪೂರಣಂ ।
ಪ್ರಸನ್ನ ವೆಂಕಟಂ ವಂದೇ । ಗುರುಭಾವಂ ಪದಾಶ್ರಾಯಿ ॥

॥ ಶ್ರೀತಾತ್ಪ್ರಾಪ್ತಸುವಿಜ್ಞಾನಂ ಶ್ರೀಶೈಕನಿರತಂ ಸದಾ
ಪ್ರಸನ್ನವೆಂಕಟಾರ್ಯೋ ಮೇ ಭೂಯಾತ್ ಸರ್ವಾರ್ಥಸಿದ್ಧಿಯೆ ॥



**ಶ್ರೀ ಪ್ರಸನ್ನ ವೆಂಕಟದಾಸರು (೧೬೮೦–೧೭೫೨)**

ಶ್ರೀ ಪ್ರಸನ್ನ ವೆಂಕಟದಾಸರ ಅಂತರ್ಯಾಮಿಯಾದ ಶ್ರೀವೆಂಕಟೇಶ ದೇವರ
ದಿವ್ಯಚರಣಾರವಿಂದಗಳಲ್ಲಿ ಈ ಕೃತಿಯನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇವೆ.



ಶ್ರೀದಿಗ್ವಿಜಯರಾಮೋ ವಿಜಯತೇ
ಶ್ರೀಮಜ್ಜಗದ್ಗುರು ಮಧ್ವಾಚಾರ್ಯ ಮೂಲಮಹಾಸಂಸ್ಥಾನ ಉತ್ತರಾದಿಮಠ
ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯತ್ವಾದ್ಯನೇಕ ಗುಣಗಣಾಲಂಕೃತ ಪದವಾಕ್ಯಪ್ರಮಾಣ
ಪಾರಾವಾರಪಾರೀಣ ಶ್ರೀಮದ್‌ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ
ಶ್ರೀಮದುತ್ತರಾದಿ ಮಠಾಧೀಶರಾದ
ಶ್ರೀಮೂಲರಾಮ, ದಿಗ್ವಿಜಯರಾಮ, ವೇದವ್ಯಾಸ ಪಾದಪದ್ಮಾರಾಧಕರಾದ
ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಕರಕಮಲಸಂಜಾತರಾದ

## ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ



## ಅನುಗ್ರಹ ಸಂದೇಶ

ನಮ್ಮ ಪರಮ ಪ್ರಿಯಶಿಷ್ಯರಾದ ಪಂ॥ ಶ್ರೀನಿವಾಸಾಚಾರ್ಯ ಸು. ಮಠದ ಇವರು ಮಹಾನುಭಾವರಾದ ಪ್ರಸನ್ನವೆಂಕಟದಾಸರ "ನಾರಾಯಣ ಪಂಜರ" ಎಂಬ ಕೃತಿಯನ್ನು ಬಹಳ ಸುಂದರವಾಗಿ ವಿವರಿಸಿದ್ದಾರೆ. ರಾಮಾಯಣ, ಭಾಗವತ ಭಾರತಾದಿಗಳ ಪ್ರಸಂಗಗಳನ್ನು ವಿಸ್ತಾರವಾಗಿ ಸಾಧಾರವಾಗಿ ನಿರೂಪಿಸಿ ಓದುಗರಿಗೆ ಬಹಳ ಅನುಕೂಲ ಮಾಡಿದ್ದಾರೆ. ದಾಸರಕೃತಿಗಳನ್ನು ಹೀಗೆ ಅರ್ಥಾನುಸಂಧಾನ ಪೂರ್ವಕವಾಗಿ ಪಠಿಸಿದರೆ ಮಹಾಜ್ಞಾನ ಲಾಭ ಪುಣ್ಯಲಾಭಗಳಾಗುವವು. ಭಗವಂತನ ದಶಾವತಾರಗಳ ಹಾಗೂ ಇನ್ನಿತರ ರೂಪಗಳ ಮಹಿಮೆ ಹಾಗೂ ಉಪಕಾರಗಳನ್ನು ತಿಳಿಸುವ ಈ ಕೃತಿಯು ನಿಜವಾಗಿಯೂ ಬಹಳ ಉಪಯುಕ್ತವಾಗಿದೆ. ಇದರ ಲಾಭವನ್ನು ಸಜ್ಜನರು ಪಡೆಯಬೇಕು. ಈಗಾಗಲೇ 96 ಪುಸ್ತಕಗಳ ಲೇಖಕರಾದ, ಶ್ರೀನಿವಾಸಾಚಾರ್ಯರಿಗೆ ಹಾಗೂ ಪ್ರಕಾಶಕರಾದ "ಪ್ರಸನ್ನ ವೆಂಕಟ ಪ್ರಕಾಶನ"ದ ಸದಸ್ಯರಿಗೂ ನಮ್ಮ ಉಪಾಸ್ಯ ಮೂರ್ತಿಗಳಾದ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸ ದೇವರು ಜ್ಞಾನಭಕ್ತಿ ವೈರಾಗ್ಯಾದಿಗಳನ್ನು ನೀಡಿ ಈ ತರಹದ ಸೇವೆಯನ್ನು ನಿರಂತರವಾಗಿ ಸ್ವೀಕರಿಸಲಿ ಎಂದು ಪ್ರಾರ್ಥಿಸುತ್ತೇವೆ.

ಕ್ಯಾಂಪ : ಬಾಗಲಕೋಟೆ — **ಶ್ರೀ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು**

ದಿನಾಂಕ – 13.6.12 — ಉತ್ತರಾದಿ ಮಠ

# ಮುನ್ನುಡಿಯೆಂಬ ಹೊನ್ನುಡಿ

"ನಾರಾಯಣಾಯ ನಮೋ ನಾರಾಯಣ" ಎಂಬ ನಾಮಸ್ಮರಣೆಯ ಝೇಂಕಾರವೇ ಓಂಕಾರದ ಶಕ್ತಿಯನ್ನು ಪಡೆದುಕೊಂಡಿರುವ ಅಪೂರ್ವ ಹರಿದಾಸಕೃತಿಯೇ ಪ್ರಸನ್ನವೆಂಕಟದಾಸರ **"ನಾರಾಯಣ ಪಂಜರ"**. ಬದುಕಿನ ದಿನನಿತ್ಯದ ಕಷ್ಟ ನಷ್ಟ ಸಂಕಷ್ಟಗಳ, ದುಃಖ ದುಗುಡ ದುಮ್ಮಾನಗಳ ಶರಪಂಜರದಿಂದ ಬಿಡಿಸಿಕೊಂಡು, ಅಲೌಕಿಕ ಆನಂದ ಹಾಗೂ ದೈವೀಸುಖದ ಅನುಭವವನ್ನು ಪಡೆಯುವ ಶಕ್ತಿಯನ್ನು ತುಂಬಿಟ್ಟುಕೊಂಡಿರುವ ಹಾಡೇ ನಾರಾಯಣ ಪಂಜರ.

ಪ್ರಸನ್ನವೆಂಕಟದಾಸರ ಸಾಹಿತ್ಯವೇ ಹಾಗೆ. ಅದು ಹಂಸಸಾಹಿತ್ಯ. ವಿವೇಕ ಅವಿವೇಕವನ್ನು ತಿಳಿಸಿ, ಅವಿವೇಕದ ಮಾರ್ಗ ಬಿಡಿಸಿ, ವಿವೇಕದ ಮಾರ್ಗದಲ್ಲಿ ಓದುಗರನ್ನು ಪರಮಾತ್ಮನೆಡೆಗೆ ಕರೆದೊಯ್ಯುವಂತಹ ಭಗವನ್‌ಮಹಿಮಾ ಪ್ರತಿಪಾದಕ ಸಾಹಿತ್ಯ. ಹಾಗಾಗಿಯೇ ಅದು ಶಾಸ್ತ್ರದಷ್ಟೇ ಮಹತ್ವಪೂರ್ಣವಾದುದು. ಹೃದಯವನ್ನು ಅರಳಿಸುವ ಈ ಹಂಸಸಾಹಿತ್ಯವನ್ನು ಪರಮಹಂಸರೂ ಓದುವಂತಹ ರೀತಿಯಲ್ಲಿ ಪ್ರಸನ್ನವೆಂಕಟದಾಸರು ರಚಿಸಿರುವುದು ಅಸದೃಶವೇ ಸರಿ.

ರಾಮಾಯಣ ಭಾರತ ಭಾಗವತಗಳ ಸಮನ್ವಯ ಹಾಗೂ ಶಾಸ್ತ್ರೀಯ ವಿವೇಚನೆಯಿಂದ ಪ್ರಸನ್ನವೆಂಕಟದಾಸರು ರಚಿಸಿರುವ ನಾರಾಯಣ ಪಂಜರ ಕೃತಿಯ ಹೂರಣವನ್ನು ಈ ಕೃತಿಯಲ್ಲಿ ವಿದ್ವಾಂಸರಾದ ಶ್ರೀನಿವಾಸ ಮಠದ ಅವರು ಅರ್ಥಪೂರ್ಣವಾಗಿ ಓದುಗರ ಮುಂದಿ ಬಿಡಿಸಿಟ್ಟಿದ್ದಾರೆ. ಈಗಾಗಲೇ ದಾಸಸಾಹಿತ್ಯ ಕುರಿತಾದ ಅನೇಕ ಉಪಯುಕ್ತ ಗ್ರಂಥಗಳನ್ನು ಬರೆದಿರುವ ಶ್ರೀನಿವಾಸ ಮಠದ ಅವರು ಈ ಗ್ರಂಥದಲ್ಲಿ ನಾರಾಯಣ ಪಂಜರದ ಮರ್ಮಗಳನ್ನು ಅನುಸಂಧಾನಪೂರ್ವಕ ತೋರಿಸಿಕೊಡುತ್ತ ಅವುಗಳ ಅರ್ಥಗಳನ್ನು ಪಂಜರದಿಂದ ಬಿಡಿಸಿ ಹೊರತೆಗೆದುಕೊಟ್ಟಿದ್ದಾರೆ.

ನಲವತ್ತೊಂದು ನುಡಿಗಳ ನಾರಾಯಣ ಪಂಜರವು ಪರಮಾತ್ಮನ ನಾನಾ ಅವತಾರಗಳ ಮಹಿಮಾವಿಶೇಷಗಳನ್ನು ಬಣ್ಣಿಸುತ್ತಲೇ ನಾರಾಯಣ ನಾಮಸ್ಮರಣೆ ಹೇಗೆ ನರಕಸ್ಥರನ್ನು ಬಡಿದೆಬ್ಬಿಸಿ, ಅವರನ್ನೂ ದುಃಖದಿಂದ ಪಾರುಮಾಡಿ ಸ್ವರ್ಗದ ದಾರಿಗೆ ಹಚ್ಚುತ್ತದೆ ಎಂಬ ಸಂದೇಶ ಹೊತ್ತೇ ಪ್ರಾರಂಭವಾಗುತ್ತದೆ. 'ನಾರಾಯಣ ಪಂಜರ' ಕೃತಿ ಪ್ರಸನ್ನವೆಂಕಟದಾಸರು ಕಲಿಯುಗದ ಸಾಧಕರಿಗೆ, ಕನ್ನಡ ಬಲ್ಲ ಸಜ್ಜನರಿಗೆ, ಸಾಮಾನ್ಯರಿಗೆ ನೀಡಿರುವ ಈ ಕೃತಿ ಭಕ್ತಿಪ್ರಪಂಚದ ವಿಸ್ಮಯಗಳಿಗೆ ಪ್ರವೇಶದ್ವಾರ. ಈ ವಿಶೇಷ ಕೃತಿ ಮುಕ್ತಿಯ ದಾರಿಯನ್ನು ತೋರಿಸುವ ಕೈಮರ. ನಾಮಸ್ಮರಣೆಯೆನ್ನುವ ಭಕ್ತಿಗಂಗೆ ಪ್ರಸನ್ನವೆಂಕಟರ ಈಕೃತಿಯಲ್ಲಿ ಹರ್ಷ ಉಲ್ಲಾಸ ಮಹಿಮಾಭರಿತಳಾಗಿ ಧುಮ್ಮಿಕ್ಕುತ್ತಾ ಇದನ್ನು ಓದುವವರನ್ನೆಲ್ಲಾ ಪುನೀತರನ್ನಾಗಿ ಮಾಡುತ್ತಾಳೆ. ಶ್ರೀನಿವಾಸಮಠದವರ ಅರ್ಥವಿಶೇಷಗಳನ್ನು ಅರಗಿಸಿಕೊಂಡು ಈ ಹಾಡುಗಳನ್ನು ಮನನಮಾಡಿದಾಗ ಅಂತರಂಗದಲ್ಲಿ ಭಗವದ್ದರ್ಶನದ ಭಾವಾನುಭವ ಆಗುತ್ತದೆ.



ನಾರಾಯಣನೇ ಶಾಶ್ವತ ಸಖ. ಅವನ ನಿರಂತರ ಸ್ಮರಣೆಯಿಂದಲೇ ಶಾಶ್ವತ ಸುಖ. ಅದಕ್ಕಾಗಿಯೇ ಮೊದಲ ಪದ್ಯದಲ್ಲಿಯೇ ಪ್ರಸನ್ನವೆಂಕಟರು ಆರುಬಾರಿ ನಾರಾಯಣ ನಾಮಸ್ಮರಣೆ ಮಾಡಿ ಈ ಪಥ ಮುಕ್ತಿ ಪಥವೆಂದು ತೋರಿಸಿಕೊಟ್ಟಿದ್ದಾರೆ. ನಾರಾಯಣ ನಾಮಸ್ಮರಣೆ ಮಾಡುವವರ ಮನೆಯಲ್ಲಿ ಮುಕ್ತಿ ದೇವತೆ ಶಾಶ್ವತವಾಗಿ ನೆಲೆಸಿರುತ್ತಾಳೆ. "ಸುಲಭನೋ ಹರಿ ತನ್ನವರನು ಅರೆಘಳಿಗೆ ಬಿಟ್ಟಗಲನು ರಮಾಧವನ ಒಲಿಸಲು ಅರಿಯದೆ ಪಾಮರರು ಬಳಲುವರು ಭವದೊಳಗೆ" ಎಂದಿರುವ ಜಗನ್ನಾಥದಾಸರ ಮಾತಿನ ಹೆಚ್ಚು ಸ್ಪಷ್ಟನೆ ನಾರಾಯಣ ಪಂಜರದಲ್ಲಿ ಗೋಚರವಾಗುತ್ತದೆ. ಈ ಹಾಡು ಓದುವವರ ಮನೋಬಲ, ಆತ್ಮಸ್ಥೈರ್ಯ ಹೆಚ್ಚು ದೃಢವಾಗುತ್ತದೆ. ನಿತ್ಯ ನಿರಂತರ ದೇವರ ಸ್ಮರಣೆ ಮಾಡುತ್ತಿರುವವರಿಗೆ, ಬದುಕಿನ ಎಲ್ಲ ಪರೀಕ್ಷೆಗಳನ್ನು ಸಹಿಸುವ ಶಕ್ತಿ ಬರುತ್ತದೆ. ಬಾಳಿಗೊಂದು ನಂಬಿಕೆ, ಜೀವನದಲ್ಲಿ ಶ್ರದ್ಧೆ ಬರುತ್ತದೆ ಈ ಹಾಡುಗಳ ನಿತ್ಯ ಪಾರಾಯಣದಿಂದ.

ಜಗನ್ನಾಥದಾಸರು ಬರೆದಿರುವ "ಶ್ರೀ ಮುಕುಂದನ ಪರಮ ಮಂಗಳ ನಾಮ ನರಕಸ್ಥರನ್ನು ಸಲಹಿತು ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು" ಎಂಬ ಹರಿಕಥಾಮೃತಸಾರದ ವ್ಯಾಖ್ಯಾನದಂತಿದೆ ಪ್ರಸನ್ನವೆಂಕಟದಾಸರು ಬರೆದಿರುವ ನಾರಾಯಣ ಪಂಜರ, ಎಂಬ ವಿಚಾರವನ್ನು ಅಪೂರ್ವ ಪ್ರಸಂಗಗಳ ರಸಾನುಭವ ವಿವರಣೆಗಳ ಮೂಲಕ ವಿಶೇಷವಾಗಿ ಸಮರ್ಥಿಸಿ ತೋರಿಸಿದ್ದಾರೆ, ಶ್ರೀನಿವಾಸಮಠದವರು ತಮ್ಮ ಆ ಕೃತಿಯಲ್ಲಿ.

"ಮುನಿ ಕಾಲಲೊದೆಯೆ ಎದ್ದು ಕರುಣಿಸಿದೆ ಕರುಣಾನಿಧಿ" ಎನ್ನುವ ಪುಟ್ಟವಾಕ್ಯದಲ್ಲಿ ಎಷ್ಟು ಅಪಾರವಾದ ಪೌರಾಣಿಕ ಕಥಾ ಸಂದರ್ಭಗಳ ವಿವರಣೆಯಿದೆ ಎನ್ನುವುದನ್ನು ಮಠದವರು ತೋರಿಸಿದ್ದಾರೆ. ಅದು ಗಜೇಂದ್ರ ಮೋಕ್ಷವಿರಬಹುದು. ಧ್ರುವ ಚರಿತ್ರೆಯಿರಬಹುದು. ಪ್ರಹ್ಲಾದನ ಭಕ್ತಿಯಿರಬಹುದು, ರಾಮಕಥಾ ಮಹಿಮೆಯಿರಬಹುದು, ಕಾಳಿಂಗನ ಮೆಟ್ಟಿ ನಾಟ್ಯವಾಡಿದ ಕೃಷ್ಣಕಥೆ ಇರಬಹುದು, ನವನೀತ ಚೋರನ ವೃತ್ತಾಂತ, ರಾಸಕ್ರಿಡಾ ವರ್ಣನೆಯಿರಬಹುದು, ರುಕ್ಮಿಣೀ ಕಲ್ಯಾಣವಿರಬಹುದು, ಒಂದೊಂದು ವೃತ್ತಾಂತವನ್ನೂ ಬೀಜರೂಪದಲ್ಲಿ ನಾರಾಯಣ ಪಂಜರವೆಂಬ ಈ ಅಮೃತಫಲದಲ್ಲಿ ಪ್ರಸನ್ನವೆಂಕಟದಾಸರು ಅಡಗಿಸಿಟ್ಟಿದ್ದರೆ, ಶ್ರೀನಿವಾಸಮಠದವರು, ಆ ಬೀಜಗಳನ್ನು ಬಿಡಿಸಿ, ಅವುಗಳ ಅಣಿಮುತ್ತು ಒಳಕಾಳುಗಳನ್ನು, ಆ ಮಾತಿನ ಹಿಂದೆ ಇರುವ ಕಥಾಮರ್ಮ ಹಾಗೂ ಧರ್ಮ ಸಂದೇಶಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಓದುಗರಿಗೆ ತಿಳಿಸಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಬಿಂದುವಿನಲ್ಲಿ ಸಿಂಧುವನ್ನು ಅಡಗಿಸುವ ಕಾವ್ಯಕೌಶಲ್ಯ ಪ್ರಸನ್ನವೆಂಕಟದಾಸರಲ್ಲಿ ಕಂಡರೆ, ಆ ಬಿಂದುವನ್ನು ಸಿಂಧುಶಯನನತ್ತ ಕರೆದೊಯ್ಯುವ ನಾವೆಯನ್ನಾಗಿ ಅರ್ಥವನ್ನು ಅರಳಿಸುವ ಪ್ರತಿಭೆ ಶ್ರೀನಿವಾಸಮಠದ ಅವರದಾಗಿದೆ. ಪ್ರಸನ್ನವೆಂಕಟದಾಸರ ಬೆಳದಿಂಗಳಿನ ಭಾಷೆಗೆ, ಶಾಸ್ತ್ರೀಯ ಸುಪತ್ತಿಗೆ, ಅಸದೃಶ ಪ್ರತಿಭೆಗೆ, ಮಹಾದೈವಾನುಗ್ರಹಕ್ಕೆ ಶತಕೋಟಿ ನಮನಗಳನ್ನು ಸಲ್ಲಿಸಿದರೂ ಕಡಿಮೆಯೇ. ಹಾಗೆಯೇ ಶ್ರೀನಿವಾಸಮಠದರು ವಿದ್ವತ್ಪೂರ್ಣವಾಗಿ ಮಾಡಿರುವ ಈ ಅರ್ಥಾನುಸಂಧಾಬಕ್ಕೆ ಹೃದಯ ತುಂಬಿದ ವಿಶೇಷ ಕೃತಜ್ಞತೆಗಳು.



ಈಗ್ಗೆ ಮೂವತ್ತು ವರ್ಷಗಳ ಹಿಂದೆ ನಾನು, ಕೊರಟಿ ಶ್ರೀನಿವಾಸರಾಯರು ಆದ್ಯರಾಮಾಚಾರ್ಯರು ಬಾಗಲಕೋಟೆಗೆ ಹೋಗಿ ಪ್ರಸನ್ನವೆಂಕಟದಾಸರು ಬಾಳಿಬದುಕಿದ್ದ ಮನೆ, ಅವರು ಪೂಜಿಸುತ್ತಿದ್ದ ದೇವತಾಮೂರ್ತಿ, ತಾಳತಂಬೂರಿ ಎಲ್ಲಾ ನೋಡಿಬಂದಿದ್ದಾಗ, ಹಾಗೆಯೇ ಬಾದಾಮಿಯಲ್ಲಿ ಅವರು ತಮ್ಮ ಬದುಕಿನ ಅಂತಿಮ ದಿನಗಳನ್ನು ಕಳೆದ ಸ್ಥಳವನ್ನು ನೋಡಿಬಂದಾಗ, ಅವರ ಒಂದೊಂದು ಹಾಡುಗಳನ್ನು ಓದುತ್ತಿರುವಾಗ, ಪ್ರಸನ್ನ ವೆಂಕಟದಾಸರು ಒಂದು ದೊಡ್ಡ ಯುಗಶಕ್ತಿ, ಆದರೆ ಅವರನ್ನು ಕುರಿತಾಗಿ ಆಗಬೇಕಾದಷ್ಟು ಕೆಲಸ ಆಗಲಿಲ್ಲ ಎನ್ನುವ ಮೂಕಶೋಕದಿಂದ ನಾನು ಬಹಳಷ್ಟು ದಿನ ಬೇಸರದಿಂದ ಒದ್ದಾಡಿದ್ದೆ. ಅನೇಕ ಪ್ರಸಂಗಗಳಲ್ಲಿ ಈ ಬಗ್ಗೆ ನನ್ನ ನೋವನ್ನು ವ್ಯಕ್ತಪಡಿಸಿದ್ದೆ. ಆದರೆ ದೈವ ಒಲಿದಾಗ ತಾನೇ ಎಲ್ಲ ಬಾಗಿಲುಗಳೂ ತೆರೆದುಕೊಳ್ಳುತ್ತವೆ ಎನ್ನುವಂತೆ ಡಾ॥ ಸುಭಾಸ ಕಾಖಂಡಕಿ ಹಾಗೂ ಶ್ರೀಮತಿ ರೇಖಾ ಕಾಖಂಡಕಿ ದಂಪತಿಗಳು ಶ್ರೀಪ್ರಸನ್ನವೆಂಕಟ ಪ್ರಕಾಶನ ಹಾಗೂ ಶ್ರೀಪ್ರಸನ್ನವೆಂಕಟ ಕಲ್ಚರಲ್ ಆಂಡ್ ಚರಿಟೇಬಲ್ ಟ್ರಸ್ಟ್ (ರಿ.) ಪ್ರಾರಂಭಿಸಿ ಅತ್ಯಂತ ಶ್ರದ್ಧೆ, ಪ್ರೀತಿ, ಸಮರ್ಪಣಭಾವ ಹಾಗೂ ಭಕ್ತಿಯಿಂದ ಶ್ರೀಪ್ರಸನ್ನ ವೆಂಕಟದಾಸರನ್ನು ಕುರಿತ ಒಂದೊಂದೇ ಗ್ರಂಥಗಳನ್ನು ಅವರ ಹಾಡುಗಳ ಅರ್ಥವೈಶಿಷ್ಟ್ಯವನ್ನು ವಿದ್ವಾಂಸರಿಂದ ಬರೆಸಿ, ಪ್ರಕಟಿಸುತ್ತಾ ಬಂದಿದ್ದು, ಇಡೀ ದಾಸಸಾಹಿತ್ಯ ಪ್ರಪಂಚಕ್ಕೆ ತುಂಬುಸಂಭ್ರಮ ತಂದ ವಿಚಾರವಾಯಿತು, ನನಗಂತೂ ಅವರ ಈ ಶ್ರದ್ಧೆ, ಸೇವೆ ಹಂಡೆ ಹಾಲು ಕುಡಿದಷ್ಟು ಸಂತಸತಂದಿತ್ತು. ಕಾಖಂಡಕಿ ದಂಪತಿಗಳ ಶ್ರಮ, ಹಾಗೂ ಪರಿಶ್ರಮ, ಕಳಕಳಿ, ಸಾಹಿತ್ಯ ಪ್ರೇಮ, ಪ್ರಸನ್ನವೆಂಕಟದಾಸರಲ್ಲಿ ಇರಿಸಿರುವ ಭಕ್ತಿ ಇದು ದಾಸಸಾಹಿತ್ಯ ಜಗತ್ತಿನ ಭಾಗ್ಯದಬಾಗಿಲು ತೆಗೆದಂಥ ಅನುಭವವಾಗಿದೆ. ಈ ನಿಟ್ಟಿನಲ್ಲಿ ಇತರ ದಾಸರುಗಳ ಮನೆತನದವರೂ ಸಹ ತಮ್ಮ ಪರಂಪರೆಯ ಹಿರಿಯ ಹರಿದಾಸರುಗಳ ಸಾಹಿತ್ಯವನ್ನು ವಿದ್ವಾಂಸರಿಂದ ವಿಶ್ಲೇಷಣೆ ಮಾಡಿಸಿ ಪ್ರಕಟಿಸುವ ಪರಂಪರೆಗೆ ಡಾ॥ ಸುಭಾಷ್ ಕಾಖಂಡಕಿ ಹಾಗೂ ರೇಖಾ ಕಾಖಂಡಕಿ ದಂಪತಿಗಳ ಈ ಯೋಜನೆ ಹಾಗೂ ಕಾರ್ಯ ಪ್ರೇರಣೆಯಾಗಲಿ ಎಂದು ಆಶಿಸುತ್ತಾ, ಈ ದಂಪತಿಗಳಿಗೆ ಪರಮಾತ್ಮ ಆಯುರಾರೋಗ್ಯ ಭಾಗ್ಯ ನೀಡಿ ನೂರ್ಕಾಲ ದಾಸಸಾಹಿತ್ಯ ಸೇವೆ ಮಾಡುವಂತೆ ಅನುಗ್ರಹಿಸಲಿ ಎಂದು ಹಾರೈಸುತ್ತೇನೆ.

**– ವಿದ್ಯಾವಾಚಸ್ಪತಿ ಡಾ। ಅರಳುಮಲ್ಲಿಗೆ ಪಾರ್ಥಸಾರಥಿ**

# ಲೇಖಕರ ನುಡಿ

ಶ್ರೀ ಪ್ರಸನ್ನವೆಂಕಟ ಪ್ರಕಾಶನದ ರೂವಾರಿಗಳಾದ ಡಾ॥ ಸುಭಾಷ್ ಕಾಖಂಡಕಿಯವರು ಶ್ರೀ ಪ್ರಸನ್ನ ವೆಂಕಟದಾಸರ ಕೃತಿ. “ನಾರಾಯಣ ಪಂಜರ”ದ ವಿವರಣಾತ್ಮಕ ಪ್ರಬಂಧವನ್ನು ಬರೆದುಕೊಡಲು ಕೇಳಿಕೊಂಡರು. ಇದು ನನ್ನಿಂದ ಸಾಧ್ಯವೇ? ಎಂಬ ವಿಚಾರ ಕಾಡುತ್ತಿತ್ತು. ಆ ಭಗವಂತನ ಪ್ರೇರಣೆಯಿಂದ ಈ ಕಾರ್ಯ ಮಾಡಲು ಒಪ್ಪಿಕೊಂಡೆ. ಅದರ ಫಲವೇ ಈ ಕೃತಿ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಪ್ರಸ್ತುತ ಕೃತಿಗೆ ಅನುಗ್ರಹ ಸಂದೇಶವನ್ನು ನೀಡಲು ಶ್ರೀ ಶ್ರೀ 1008 ಶ್ರೀ ಸತ್ಯಾತ್ಮ ತೀರ್ಥ ಶ್ರೀಪಾದಂಗಳವರನ್ನು ಪ್ರಾರ್ಥಿಸಿದಾಗ ಅವರು ಸಂತೋಷದಿಂದ ಒಪ್ಪಿ ಅನುಗ್ರಹಿಸಿದ್ದಕ್ಕಾಗಿ ಅವರಿಗೆ – ನನ್ನ ಕೃತಜ್ಞತಾಪೂರ್ವಕ ಅನಂತದಂಡವತ್ ಪ್ರಣಾಮಗಳು ಸಲ್ಲುತ್ತವೆ.

ಈ ಕೃತಿಯನ್ನು ಅವಲೋಕಿಸಿ ಸಲಹೆ ಸೂಚನೆಗಳನ್ನು ನೀಡಿದ ಪಂ ॥ ಶ್ರೀ ಮೊಖಾಶಿ ಮಧ್ವಾಚಾರ್ಯ ಅವರಿಗೆ ನನ್ನ ಕೃತಜ್ಞತಾಪೂರ್ವಕ ಶಿ॥ ಸಾ॥ ನಮಸ್ಕಾರಗಳು.

ಈ ಕೃತಿ ಪ್ರಕಟಣೆಯಲ್ಲಿ ಸಹಾಯ ಮಾಡಿದ ಪಂ ॥ ಶ್ರೀ ಪ್ರದ್ಯುಮ್ನಾಚಾರ್ ಪೂಜಾರ್,ಹಾಗೂ ನನ್ನ ತಮ್ಮ ಚಿ॥ ವಾದಿರಾಜ ಮಠದ, ನನ್ನ ಸುಪುತ್ರ ಚಿ॥ ಆನಂದತೀರ್ಥ ಮಠದ, ಅಳಿಯಂದಿರಾದ ಶ್ರೀ ರಾಘವೇಂದ್ರ ಅಡಬಡ್ಡಿ ಅವರಿಗೆ ಶ್ರೀಹರಿವಾಯು ಗುರುಗಳು ಜ್ಞಾನ,ಭಕ್ತಿ, ವೈರಾಗ್ಯಾದಿಗಳನ್ನು ಕರುಣಿಸಲಿ.

ನನಗೆ ಶ್ರೀ ಪ್ರಸನ್ನವೆಂಕಟದಾಸರ ಸೇವೆಯನ್ನು ಮಾಡಲು ಅವಕಾಶ ಮಾಡಿಕೊಟ್ಟು ಈ ಕೃತಿಯನ್ನು ಶ್ರೀ ಪ್ರಸನ್ನವೆಂಕಟ ಪ್ರಕಾಶನದ ವತಿಯಿಂದ ಮುದ್ರಣಮಾಡಿಸಿ ಪ್ರಕಾಶನಗೊಳಿಸಿದ ಡಾ॥ ಸುಭಾಷ್ ಮತ್ತು ಶ್ರೀಮತಿ ರೇಖಾ ಕಾಖಂಡಕಿ ಅವರಿಗೆ ನನ್ನ ಧನ್ಯವಾದಗಳು.

ಈ ಕೃತಿಯನ್ನು ಅಂದವಾಗಿ ಮುದ್ರಣಮಾಡಿಕೊಟ್ಟ ಮೆ॥ ವಿಶ್ವಾಸ್ ಪ್ರಿಂಟ್ಸ್, ಚಾಮರಾಜಪೇಟೆ, ಬೆಂಗಳೂರು ಇವರಿಗೆ ಧನ್ಯವಾದಗಳು.

ಇತಿ ಸಜ್ಜನ ಸೇವಕ
**ಶ್ರೀನಿವಾಸ ಸು. ಮಠದ**

ಅಜರೇಕರ ಚಾಳ್
ಮೀನಾಕ್ಷಿ ಚೌಕ
ವಿಜಯಪುರ **– 586 101**



# ಪ್ರಕಾಶಕರ ಮಾತು

ಶ್ರೀಪ್ರಸನ್ನವೆಂಕಟದಾಸರ ಕೃತಿಗಳಲ್ಲಿ ಬಹು ಮಹತ್ವದ, ವೈಶಿಷ್ಟ್ಯಪೂರ್ಣವಾದ ಕೃತಿ "ನಾರಾಯಣ ಪಂಜರ" ಇದರಲ್ಲಿ ದಾಸರು ಹಲವು ರೂಪಗಳಿಂದ, ಹಲವು ನಾಮಗಳಿಂದ, ಬಹಳ ಅನನ್ಯ ರೀತಿಯಲ್ಲಿ ಹರಿನಾಮದ ಸಂಕೀರ್ತನೆ ಮಾಡಿದ್ದಾರೆ. ಆ ನಾಮದ ಅಮೃತದಂಥಹ ವೈಶಿಷ್ಟ್ಯ, ಭಕ್ತರ ಹೃದಯವನ್ನು ತುಂಬಿ ಭಕ್ತಿ ಪರಾಕಾಷ್ಠತೆಗೆ ಮುಟ್ಟುವಂತಿದೆ.

ಅದೇ ಭಕ್ತಿಭಾವದ ಬೀಜಗಳನ್ನು ಕೀರ್ತನೆಯ ಆಧ್ಯಾತ್ಮಿಕ ಒಳನೋಟವನ್ನು ವಿಸ್ತರಿಸಿ, ತುಂಬ ಅದ್ಭುತವಾಗಿ, ಒಳಗಿನ ತಿರುಳನ್ನು ತೆರೆದಿಟ್ಟಿದ್ದಾರೆ ಶ್ರೀಯುತ, ಪಂ. ಶ್ರೀನಿವಾಸಮಠದ ಅವರು. ದಾಸಸಾಹಿತ್ಯದಲ್ಲಿ ಅಧ್ಯಯನ ಶೀಲರಾಗಿ, ತಮ್ಮದೇ ಆದ ವಿದ್ವತ್ತಿನ ಮಾತುಗಳಿಂದ ವ್ಯಾಖ್ಯಾನಕ್ಕೆ ಸಾಕಷ್ಟು ಗ್ರಂಥಗಳ ಆಧಾರಕೊಟ್ಟು ಪುಷ್ಟೀಕರಿಸಿದ್ದಾರೆ. ಮಾನ್ಯ ಶ್ರೀನಿವಾಸಮಠದ ಅವರು ವ್ಯಾಸ ಸಾಹಿತ್ಯ ಮತ್ತು ದಾಸ ಸಾಹಿತ್ಯದ ಪಂಡಿತರು, 96 ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ಇವರನ್ನು, ನಾವು "ಶ್ರೀಪ್ರಸನ್ನವೆಂಕಟದಾಸಾರ್ಯ ವಿರಚಿತ ನಾರಾಯಣ ಪಂಜರ" ಕೃತಿಯಲ್ಲಿನ ಆಧ್ಯಾತ್ಮಿಕ ಒಳನೋಟವನ್ನು ಸಾಮಾನ್ಯ ಜನರಿಗೆ ತಿಳಿಯುವಂತೆ ಗ್ರಂಥ ರಚಿಸಿಕೊಡಿ ಎಂದು ವಿನಂತಿಸಿದ್ದಾಗ್ಗೆ, ಅವರು ಸಂತೋಷದಿಂದ ಒಪ್ಪಿಕೊಂಡು ಹಸ್ತಪ್ರತಿಯನ್ನು ಹೇಳಿದ ಕಾಲಕ್ಕೆ ಸರಿಯಾಗಿ ತಲುಪಿಸಿದ್ದಲ್ಲದೆ, ಡಿ.ಟಿ.ಪಿ. ಮಾಡಿದ ಕರುಡು ಪ್ರತಿಯನ್ನು ಸಹ ತಿದ್ದುಪಡಿ ಮಾಡಿದ್ದಾರೆ. ಅವರಿಗೆ ಎಷ್ಟು ಕೃತಜ್ಞತೆಗಳನ್ನು ಹೇಳಿದರೂ ಸಾಲದು. ಅವರಿಂದ ದಾಸರ ಇತರ ಕೃತಿಗಳಲ್ಲಿಯ ಆಧ್ಯಾತ್ಮಿಕ ತಿರುಳನ್ನು ತೆರೆದಿಡುವ ಗ್ರಂಥಗಳನ್ನು ರಚಿಸಿ ನಮ್ಮ ಪ್ರಕಾಶನದ ಮೂಲಕ ದಾಸರ ಭಕ್ತ ಜನಕ್ಕೆ ತಲುಪಿಸುವ ಅವಕಾಶ ಮಾಡಿ ಕೊಡಬೇಕೆಂದು ಅವರಲ್ಲಿ ವಿನಂತಿಸುತ್ತಿದ್ದೇವೆ.

ಶ್ರೀಪ್ರಸನ್ನ ವೆಂಕಟದಾಸರ ಸಮಗ್ರ ಕೃತಿಗಳಲ್ಲಿ ಅಡಗಿದ ಆಧ್ಯಾತ್ಮಿಕ ಒಳನೋಟವನ್ನು ಸುಮಾರು 50 ಸಂಪುಟಗಳಲ್ಲಿ ಹಂತ ಹಂತವಾಗಿ ಭಕ್ತ ಜನಕ್ಕೆ ತಲುಪಿಸಬೇಕೆಂದು ದಾಸರ ಪ್ರೇರಣೆಯಂತೆ ಈ ಕಾರ್ಯದಲ್ಲಿ ತೊಡಗಿದೆ, ನಮ್ಮ ನಿಮ್ಮೆಲ್ಲರ ಸಂಸ್ಥೆಗಳಾದ **ಶ್ರೀಪ್ರಸನ್ನ ವೆಂಕಟ ಪ್ರಕಾಶನ ಮತ್ತು ಶ್ರೀ ಪ್ರಸನ್ನವೆಂಕಟ ಕಲ್ಚರಲ್ ಆಂಡ್ ಚಾರಿಟೇಬಲ್ ಟ್ರಸ್ಟ್** (ರಿ) **ಬೆಂಗಳೂರು**. ನಮ್ಮ ಯೋಜನೆಯ ಪ್ರಕಾರ ಈಗ ಮೂರನೇ ಸಂಪುಟವಾಗಿ "ನಾರಾಯಣ ಪಂಜರ" ಬರುತ್ತಿದೆ. ಇದನ್ನು ಸಮಸ್ತ ದಾಸಸಾಹಿತ್ಯ ಆಸಕ್ತರು, ವಿದ್ವಾಂಸರು ಮತ್ತು ದಾಸರ ಭಕ್ತರು ಸಹೃದಯದಿಂದ ಸ್ವೀಕರಿಸುತ್ತಾರೆಂಬ ಆಸೆ ನಮ್ಮದು.

ನಮ್ಮ ವಿನಂತಿಯನ್ನು ಮನ್ನಿಸಿ ವಿದ್ವತ್ ಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟ ಅಂತರ್‌ರಾಷ್ಟ್ರೀಯ ಖ್ಯಾತ ದಾಸ ಸಾಹಿತ್ಯ ವಿದ್ವಾಂಸರಾದ ವಿದ್ಯಾವಾಚಸ್ಪತಿ ಡಾ॥ ಅರಳು ಮಲ್ಲಿಗೆ ಪಾರ್ಥಸಾರಥಿಯವರಿಗೂ ನಮ್ಮ ಅನಂತ ಕೃತಜ್ಞತೆಗಳು. ಈ ಗ್ರಂಥಕ್ಕೆ ಅನುಗ್ರಹ ಸಂದೇಶ ಬರೆದುಕೊಟ್ಟು ಈ ದಾಸರ ಜ್ಞಾನ ಕಾರ್ಯವು ನಿರಂತರ ನಡೆಯಲು ಆಶೀರ್ವದಿಸಿದ ನಮ್ಮ ನಿಮ್ಮೆಲ್ಲರ ಗುರುಗಳಾದ ಶ್ರೀ ಶ್ರೀ 1008–ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೆ ನಮ್ಮ ಭಕ್ತಿಪೂರ್ವಕ ವಂದನೆಗಳು ಹಾಗೂ ಗ್ರಂಥ ಪ್ರಕಟಣೆಗೆ ಯಥಾಶಕ್ತಿಯಾಗಿ ಧನಸಹಾಯ ಮಾಡಿ ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗಿಯಾದ ದಿ॥ ಶ್ರೀಮಧ್ವರಾವ್ ಕುಲಕರ್ಣಿ (ಬೊಮ್ಮಣಗಿ) ಅವರ ಮಗ ಶ್ರೀ ಆರ್.ಎಮ್. ಕುಲಕರ್ಣಿ ಅವರಿಗೆ ಅನಂತ ಕೃತಜ್ಞತೆಗಳು. ಇವರಿಗೆ ಶ್ರೀಪ್ರಸನ್ನವೆಂಕಟದಾಸರ ಅಂತರಾತ್ಮರಾದ ಶ್ರೀನಿವಾಸ ದೇವರ ವಿಶೇಷ ಅನುಗ್ರಹವಿರಲಿ ಎಂದು ಹಾರೈಸುತ್ತೇವೆ.

ಸುಂದರವಾಗಿ ಮುದ್ರಿಸಿದ ವಿಶ್ವಾಸ್ ಪ್ರಿಂಟ್ಸ್ ಹಾಗೂ ಮುಖಪುಟ ವಿನ್ಯಾಸಗೊಳಿಸಿದ ವಿ.ರಾಜ್ ಅವರಿಗೂ ನಮ್ಮ ಕೃತಜ್ಞತೆಗಳು.

**ಶ್ರೀ ಪ್ರಸನ್ನವೆಂಕಟ ಪ್ರಕಾಶನ ಮತ್ತು ಶ್ರೀಪ್ರಸನ್ನವೆಂಕಟ**
**ಕಲ್ಚರಲ್ ಆ್ಯಂಡ್ ಚೆರಿಟೇಬಲ್ ಟ್ರಸ್ಟ್ (ರಿ.) ಪರವಾಗಿ**
**ಶ್ರೀಮತಿ ರೇಖಾ ಕಾಖಂಡಕಿ, ಡಾ॥ ಸುಭಾಸಕಾಖಂಡಕಿ**

## ನಮ್ಮ ಪ್ರಕಾಶನದ ಇತರ ಪ್ರಕಟಣೆಗಳು

1. **ಶ್ರೀ ಪ್ರಸನ್ನವೆಂಕಟ ವಿಜಯ"** – ಲೇ॥ ಶ್ರೀಮತಿ ರೇಖಾ ಕಾಖಂಡಕಿ
   (ಶ್ರೀ ಪ್ರಸನ್ನವೆಂಕಟದಾಸರ ಜೀವನ ಆಧಾರಿತ ಕಾದಂಬರಿ)
   ಪ್ರಕಟಣೆ 2010, ಬೆಲೆ ರೂ. 120
2. ಶ್ರೀ ಪ್ರಸನ್ನವೆಂಕಟದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ, ಸಂಪುಟ – 1
   ಶ್ರೀ ಪ್ರಸನ್ನವೆಂಕಟದಾಸಾರ್ಯ ವಿರಚಿತ
   **"ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ",** (ನಾಮಗಳ ಸಂದರ್ಭ ಸಹಿತ – ಅರ್ಥವಿವರಣೆ ಈ ಕೃತಿ "ಶ್ರೀಪ್ರಸನ್ನವೆಂಕಟದಾಸಾರ್ಯ ವಿರಚಿತ ಕನ್ನಡದ ಪ್ರಪ್ರಥಮ ಶ್ರೀವಿಷ್ಣು ಸಹಸ್ರನಾಮ")
   ಲೇಖಕರು – ಡಾ. ವ್ಹಿ.ಬಿ. ಕುಲಕರ್ಣಿ ಪ್ರಕಟಣೆ 2011, ಬೆಲೆ ರೂ. 130/–
3. ಶ್ರೀ ಪ್ರಸನ್ನವೆಂಕಟದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ ಸಂಪುಟ – 2, ಶ್ರೀ ಪ್ರಸನ್ನವೆಂಕಟದಾಸಾರ್ಯ ವಿರಚಿತ
   **"ಬಿಡೆನೋ ನಿನ್ನಂಘ್ರೀ ಶ್ರೀನಿವಾಸ"** ಕೃತಿಯ – ಒಳನೋಟ
   ಲೆ। ಕೆ. ಅಪ್ಪಣ್ಣಾಚಾರ್ಯ, ಪ್ರಕಟಣೆ ವರ್ಷ : 2011 ಬೆಲೆ ರೂ. 35/–
4. ಶ್ರೀ ಪ್ರಸನ್ನವೆಂಕಟದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ ಸಂಪುಟ – ೪
   **ಶ್ರೀ ಪ್ರಸನ್ನವೆಂಕಟದಾಸರ ಕೃತಿಗಳಲ್ಲಿ ಸಿದ್ಧಾಂತದ ಸೊಬಗು ಭಾಗ – ೧ 'ಭೇದಮುಕ್ತಾವಲಿ'**
   ಲೇಖಕರು : ವಿದ್ವಾನ್ ಡಾ॥ ಆರ್. ಜಿ. ಗುಡಿ
   ಪ್ರಕಟಣೆ ವರ್ಷ : 2012 ಬೆಲೆ ರೂ. 65/–
5. **ಶ್ರೀ ಪ್ರಸನ್ನವೆಂಕಟದಾಸರ ಸಮಗ್ರ ಕೃತಿಗಳು – ಭಾಗ – 1**
   **ಶ್ರೀ ಪ್ರಸನ್ನವೆಂಕಟದಾಸರ ಅಪ್ರಕಟಿತ ಕೃತಿಗಳು**
   **(ದಾಸರು ತಾಳೆಮರದ ಎಲೆಯಲ್ಲಿ ಬರೆದ ಕೃತಿಗಳ ಹಸ್ತಪ್ರತಿ ಸಹಿತ)** – ಶಂಶೋಧನಾ ಗ್ರಂಥ ಸಂಶೋಧನೆ – ಸಂಗ್ರಹ – ಶುದ್ಧಪಾಠ : ಶ್ರೀ ಲಕ್ಷ್ಮೀಕಾಂತ ಪಾಟೀಲ (ಬಿಜಾಪುರ) ಪ್ರಕಟಣೆ ವರ್ಷ – 2012
6. **ಶ್ರೀ ಪ್ರಸನ್ನವೆಂಕಟದಾಸಾಂಚಿ ನಿವಡ್‌ಕ್ ಕೀರ್ತನೆ (ಮರಾಠಿ ಭಾಷೆಯಲ್ಲಿ)**
   ಮೂಲ ಕನ್ನಡ ಕೀರ್ತಾನಾಂಚ ಭಾರತೀಯ ಭಾಷೆತಿಲ್, ಭಾವಾನುವಾದ ಪುಷ್ಪ ಗುಚ್ಛ – 1 (ಮರಾಠಿ); ಭಾವಾನುವಾದಕರು : ಶ್ರೀ ಗುಂಡೋಪಂತ್ ಕೃಷ್ಣಾಜಿ ಸಂಗೂರಾಮ್, ಮುದ್ರಣದ ವರ್ಷ : 2012 ಬೆಲೆ : 30/–

**ವಿ.ಸೂ. : ಶ್ರೀ ಹರಿದಾಸರ ಭಕ್ತರಿಗೆ / ಹರಿದಾಸ ಸಾಹಿತ್ಯ ಆಸಕ್ತರಿಗೆ ಈ ಕೃತಿಗಳು ವಿಷೇಶ ರಿಯಾಯತಿಯಲ್ಲಿ ಲಭ್ಯ, ಪ್ರಕಾಶಕರನ್ನು ಸಂಪರ್ಕಿಸಿ. ಮೊ. 09448011954**



# ಶ್ರೀ ಪ್ರಸನ್ನವೆಂಕಟದಾಸರು – ಬದುಕು – ಬರಹ

ಹರಿದಾಸ ಚತುಷ್ಟಯರ ನಂತರ ದಾಸಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಮಹನೀಯರಲ್ಲಿ ಶ್ರೀಪ್ರಸನ್ನವೆಂಕಟದಾಸರು ಅಗ್ರಮಾನ್ಯರು. ಇವರು ಶ್ರೀವಿಜಯದಾಸರ ಸಮಕಾಲೀನರು. ಶ್ರೀಗೋಪಾಲದಾಸರು ಮತ್ತು ಹೆಳವನಕಟ್ಟೆ ಗಿರಿಯಮ್ಮನವರು ಕೂಡ ಇವರ ಸಮಕಾಲೀನರಾಗಿದ್ದರೆಂದು ತಿಳಿದುಬರುತ್ತದೆ.

ಸುಮಾರು ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಬಾಗಲಕೋಟೆಯಲ್ಲಿ ಕಾಶ್ಯಪ ಗೋತ್ರಜರಾದ ಕಾಖಂಡಕಿ ನರಸಪ್ಪಯ್ಯ ಹಾಗೂ ಲಕ್ಷ್ಮೀಬಾಯಿ ದಂಪತಿಗಳಿದ್ದರು. ಈ ದಂಪತಿಗಳಿಗೆ ಇಬ್ಬರು ಗಂಡುಮಕ್ಕಳಿದ್ದರು. ಇವರಲ್ಲಿ ಕಿರಿಯವನೇ "ವೆಂಕಟೇಶ". ಇವರೇ ಮುಂದೆ "ಪ್ರಸನ್ನವೆಂಕಟದಾಸ" ರೆಂದು ಪ್ರಸಿದ್ಧಿ ಪಡೆದರು.

ಚಿಕ್ಕಂದಿನಲ್ಲಿಯೇ ಹೆತ್ತವರನ್ನು ಕಳೆದುಕೊಂಡ ಬಾಲಕ ವೆಂಕಟೇಶ ಅಣ್ಣನ ಆಶ್ರಯದಲ್ಲಿ ಬೆಳೆಯಬೇಕಾಯಿತು. ಅಣ್ಣನ ವಿವಾಹವಾಗಿತ್ತು. ಅವನು ವೈದಿಕ ವೃತ್ತಿಯಿಂದ ಜೀವನ ಸಾಗಿಸುತ್ತಿದ್ದ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅಣ್ಣ ಜನಪ್ರಿಯತೆಯನ್ನು ಗಳಿಸಿದ್ದ. ಅತ್ತಿಗೆ ಮಾತ್ರ ಮೈದುನ ವೆಂಕಟೇಶನ ಬಗ್ಗೆ ಗೌರವಾದರಗಳನ್ನು ತೋರಿಸುತ್ತಿರಲಿಲ್ಲ. ಅವನನ್ನು ಜೀತದಾಳಿನಂತೆ ದುಡಿಸಿಕೊಳ್ಳುತ್ತಿದ್ದಳು. ಮನೆಗೆಲಸ ಮಾಡುವುದರಲ್ಲಿ ಹೆಚ್ಚಿನ ವೇಳೆ ಖರ್ಚಾಗುತ್ತಿತ್ತು. ಕಾರಣ ವಿದ್ಯಾಭ್ಯಾಸ ಮಾಡಲು ಹೆಚ್ಚು ಅವಕಾಶ ಸಿಗಲಿಲ್ಲ. ಆದರೂ ಸದ್ವಂಶಜನಾದ, ಸಾತ್ವಿಕನಾದ ವೆಂಕಟೇಶ. ಅವಕಾಶ ಸಿಕ್ಕಾಗ ಪುರಾಣ, ಪ್ರವಚನಗಳನ್ನು ಶ್ರದ್ಧೆಯಿಂದ ಕೇಳುತ್ತಿದ್ದ. ಶ್ರೀವೆಂಕಟೇಶ ಮಹಾತ್ಮೆ ಪುರಾಣಗಳನ್ನು ಕೇಳುತ್ತಿರುವಾಗ ಆ ಮನೆದೈವ ಶ್ರೀನಿವಾಸ ದೇವರಲ್ಲಿ ಭಕ್ತಿ ಅಂಕುರಿಸಿ ಬೆಳೆಯಲಾರಂಭಿಸಿತು.

ಬೇಸಿಗೆಯ ಕಾಲದಲ್ಲಿ ಒಂದು ಬಾರಿ ಬಾಯಾರಿ ಕುಡಿಯಲು ಮಜ್ಜಿಗೆಯನ್ನು ಕೇಳಿದಾಗ, ಅತ್ತಿಗೆ ಆಡಿದ ಕರ್ಣಕಠೋರ ನುಡಿಗಳು ವೆಂಕಟೇಶನ ಮನಸ್ಸಿನ ಮೇಲೆ ಅಪಾರವಾದ ಆಘಾತವನ್ನುಂಟುಮಾಡಿದವು. ಇನ್ನು ಮುಂದೆ ಅವರ ಆಶ್ರಯದಲ್ಲಿ ಇರುವುದು ಬೇಡವೆನಿಸಿ ಮನೆಬಿಟ್ಟು ಹೊರಟ. ಊರಿನಲ್ಲಿ ಭಕ್ತರ ಗುಂಪೊಂದು ತಿರುಪತಿ ಕಡೆ ಹೊರಟಿತ್ತು. ಆ ಗುಂಪಿನೊಡನೆ ಇವನು ಹೊರಟ ಯಾತ್ರಿಕರ ಗುಂಪು ಕಪಿಲತೀರ್ಥದ ಕಡೆಗೆ ಸಾಗಿತು. ಕಪಿಲತೀರ್ಥದ ವಾತಾವರಣ ರಮಣೀಯವಾಗಿತ್ತು. ವೆಂಕಣ್ಣ ಕಪಿಲತೀರ್ಥದಲ್ಲಿ ಸ್ನಾನಮಾಡಿ ಕಪಿಲೇಶ್ವರನ ದರ್ಶನ ಪಡೆದು ಯಾತ್ರಿಕರ ಜೊತೆ ಬೆಟ್ಟವನ್ನು ಏರಿದ. ಗೋವಿಂದಾ, ಗೋವಿಂದಾ ಎಂಬ ದಿವ್ಯ ಘೋಷಣೆಗಳ ನಡುವೆ ಗಾಳಿ ಗೋಪುರವನ್ನು ಮುಟ್ಟಿದರು. ಮಾರ್ಗ ಮಧ್ಯದಲ್ಲಿ ಶ್ರೀನರಸಿಂಹ ದೇವರ ದರ್ಶನ ಮಾಡಿಕೊಂಡು ಮುಂದೆ ಹೊರಟರು. ಬೆಟ್ಟದ ಮೇಲೆ ಶ್ರೀನಿವಾಸದೇವರ ಹೊರ ಗೋಪುರವನ್ನು ಕಂಡಾಗ ಯಾತ್ರಿಕರ ಉತ್ಸಾಹಕ್ಕೆ ಮೇರೆ ಇಲ್ಲದಾಯಿತು. "ಗೋವಿಂದಾ" ನಾಮದ ಭಕ್ತಿಯ ಉದ್ಗಾರ ಮುಗಿಲು ಮುಟ್ಟಿತು.

ಗೋಪುರಕ್ಕೆದುರಾಗಿ ಕೈಜೋಡಿಸಿ ನಿಂತಿರುವ ಹನುಮಂತ ದೇವರ ದರ್ಶನ ಮಾಡಿಕೊಂಡು ವೆಂಕಣ್ಣ ಶ್ರೀನಿವಾಸದೇವರ ಮಂದಿರದ ಮಹಾದ್ವಾರದ ಬಳಿಗೆ ಬಂದ. ಶ್ರೀನಿವಾಸಾ! ಶ್ರೀನಿವಾಸಾ! ಎಂದು ಮೊರೆ ಇಡುತ್ತ ಸಾಷ್ಟಾಂಗ ನಮಸ್ಕಾರ ಮಾಡಿದ. ಬಹಳ ಹೊತ್ತಿನ ಮೇಲೆ ವೆಂಕಣ್ಣ ಎದ್ದು ನಿಂತ.



ನಂತರ ಯಾತ್ರಿಕರ ಜೊತೆ ವೆಂಕಣ್ಣ, ಸ್ವಾಮಿ ಪುಷ್ಕರಿಣಿ ಸ್ನಾನ ಮಾಡಿ ಭೂವರಾಹದೇವರ ದರ್ಶನ ಮಾಡಿಕೊಂಡು ಶ್ರೀನಿವಾಸನ ದರ್ಶನಕ್ಕೆ ಹೊರಟ. ಶ್ರೀನಿವಾಸನ ಮಂಗಳ ಮೂರ್ತಿಯ ದರ್ಶನ ಮಾಡಿಕೊಂಡಾಗ ವೆಂಕಣ್ಣನ ಆನಂದಕ್ಕೆ ಪಾರವೇ ಇರಲಿಲ್ಲ. ತನ್ನ ಕೈಗಳೆರಡನ್ನು ಮೇಲೆತ್ತಿ ಜೋಡಿಸಿ "ಶ್ರೀನಿವಾಸ" ಎಂದು ಕೂಗಿದ. ಅವನ ಆ ಧ್ವನಿ ತರಂಗ ತರಂಗವಾಗಿ ಹೊರಟು ಶ್ರೀನಿವಾಸನ ಪಾದಕಮಲಗಳನ್ನು ಮುಟ್ಟಿತು. ಅಲ್ಲಿ ಕೆಲವು ಜನ ಶ್ರೀನಿವಾಸನ ಕುರಿತು ಭಜನೆ ಮಾಡುತ್ತಿದ್ದರು.

ಮರುದಿನ ಯಥಾ ಪ್ರಕಾರ ಗುಂಪಿನಲ್ಲಿ ಶ್ರೀನಿವಾಸದೇವರ ದರ್ಶನ ಮಾಡಲು ಬಂದು ನಿಂತ ವೆಂಕಣ್ಣ. ಶ್ರೀನಿವಾಸದೇವರ ಹತ್ತಿರ ಬಂದಂತೆಲ್ಲಾ ಆ ಪರಮಮಂಗಳ ಮೂರ್ತಿಯನ್ನು ನೋಡುತ್ತ ವೆಂಕಣ್ಣನ ಕಣ್ಣಲ್ಲಿ ಆನಂದಬಾಷ್ಪದ ಕೋಡಿಯೇ ಹರಿದಿತ್ತು. ಶ್ರೀನಿವಾಸನ ವಿಗ್ರಹದಿಂದ ಬಂದ ಬೆಳಕು ಬೆಳದಿಂಗಳಂತೆ ಸುತ್ತಲೂ ಪಸರಿಸಿತ್ತು. ಅಲ್ಲಿಂದ ಒಂದು ಬೆಳಕಿನ ಕಿರಣ ಹೊರಟು ನೇರವಾಗಿ ವೆಂಕಣ್ಣನ ಎದೆಯನ್ನು ಹೊಕ್ಕಿತು. ವೆಂಕಣ್ಣನಿಗೆ ಮೈ ರೋಮಾಂಚನವಾಯಿತು. ಅವನು ದೇವರ ಮುಂದೆ ಬಿದ್ದುಬಿಟ್ಟ. ಶ್ರೀನಿವಾಸನ ಸನ್ನಿಧಿಯಲ್ಲಿ ಬಿದ್ದ ವೆಂಕಣ್ಣನಿಗೆ ಕನಸಿನ ಸ್ಥಿತಿಯಲ್ಲಿ ಶ್ರೀನಿವಾಸನೇ ಸಾಕ್ಷಾತ್ತಾಗಿ ಬಂದು ಅವನ ನಾಲಗೆಯ ಮೇಲೆ "ಪ್ರಸನ್ನ ವೆಂಕಟ" ಎಂದು ಬರೆದು ಅದೃಶ್ಯನಾದ.

ವೆಂಕಣ್ಣ ಎದ್ದುನಿಂತ. ಎದುರಿನಲ್ಲಿದ್ದ ಶ್ರೀನಿವಾಸ ದೇವರಮೂರ್ತಿಯನ್ನು ನೋಡುತ್ತ ಸುಸ್ವರ ಕಂಠದಿಂದ ದೇವರ ಸ್ತೋತ್ರ ಮಾಡಲು ಪ್ರಾರಂಭಿಸಿದ. ಆ ಕ್ಷಣದಿಂದ ವೆಂಕಣ್ಣ ಹರಿದಾಸದೀಕ್ಷೆ ಹೊಂದಿ "ಪ್ರಸನ್ನವೆಂಕಟದಾಸ" ನಾಗಿಬಿಟ್ಟನು.

ಅದೇ ರಾತ್ರಿ ದೇವಸ್ಥಾನದ ಅಧಿಕಾರಿಗಳಾದ ಮಹಂತರಿಗೆ ಸ್ವಪ್ನವಾಯಿತು. ಸ್ವಪ್ನದಲ್ಲಿ ಶ್ರೀನಿವಾಸದೇವರು. "ಪ್ರಸನ್ನವೆಂಕಟದಾಸ"ರನ್ನು ತೋರಿಸಿ "ಇವರು ನನ್ನ ಭಕ್ತರು. ಇವರಿಗೆ ಎಲ್ಲ ಸೌಕರ್ಯಗಳನ್ನು ಏರ್ಪಡಿಸು" ಎಂದು ಹೇಳಿದರು. ಆ ಪ್ರಕಾರ ಮಹಂತರು ಮರುದಿನ ಪ್ರಸನ್ನವೆಂಕಟದಾಸರನ್ನು ಹುಡುಕಿಕೊಂಡು ದೇವಾಲಯಕ್ಕೆ ಬಂದರು. ದಾಸರನ್ನು ನೋಡಿ ನಮಸ್ಕರಿಸಿ ಶ್ರೀನಿವಾಸದೇವರು ಕೊಟ್ಟ ಸೂಚನೆಯನ್ನು ತಿಳಿಸಿದರು ದಾಸರು ಭಗವಂತ ಇದು "ನಿನ್ನ ಇಚ್ಛೆ" ಎಂದರು.

ಮಹಂತರು ಸಕಲ ಮರ್ಯಾದೆಗಳೊಡನೆ ಅವರನ್ನು ಶ್ರೀನಿವಾಸನ ದರ್ಶನಕ್ಕೆ ಕರೆದುಕೊಂಡು ಹೋಗಿ ದರ್ಶನ ಮಾಡಿಸಿದರು. ನಂತರ ದೇವರ ನೈವೇದ್ಯವನ್ನು ಕೊಟ್ಟು ಅವರ ಬಿಡಾರಕ್ಕೆ ಕಳಿಸಿಕೊಟ್ಟರು.

"ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ" ಉಕ್ತಿಯಂತೆ ಶ್ರೀನಿವಾಸದೇವರ ಅನುಗ್ರಹದಿಂದ ಎಲ್ಲವೂ ದೊರಕಿತ್ತು. ಪ್ರಸನ್ನವೆಂಕಟದಾಸರು ತಮಗಾಗುತ್ತಿದ್ದ ಸುಖ, ವೈಭವಗಳೆಲ್ಲವನ್ನು ಶ್ರೀನಿವಾಸನಿಗೆ ಅರ್ಪಿಸಿ ಸಂತೋಷಪಟ್ಟರು.

ದಾಸರು ಬಾಗಲಕೋಟೆಗೆ ಹಿಂದಿರುಗಿದರು. ಪ್ರಸನ್ನ ವೆಂಕಟದಾಸರ ಆಗಮನದಿಂದ ಊರಿನ ಜನರಿಗೆಲ್ಲ ತುಂಬಾ ಆನಂದವಾಯಿತು. ದಾಸರು ಕಾವಿವಸ್ತ್ರವನ್ನು ತಲೆಗೆ ಸುತ್ತಿ, ಕಾಲಿಗೆ ಗೆಜ್ಜೆಕಟ್ಟಿ, ತಂಬೂರಿ, ಚಿಟಿಕೆ ಗೋಪಾಳಬುಟ್ಟಿ ಹಿಡಿದು ಭಗವಂತನ ಗುಣಗಾನ ಮಾಡುತ್ತಾ ಸಂಚಾರ ಮಾಡತೊಡಗಿದರು. ಬಾಗಿಲುಕೋಟೆಯ ಜನರಿಗೆ ದೊಡ್ಡ ನಿಧಿಯೊಂದು ದೊರೆತಂತಾಯಿತು.



ಶ್ರೀನಿವಾಸನ ಅನುಗ್ರಹದಿಂದ ದಾಸರ ಬಾಯಿಂದ ಬಂದ ಮಾತು ಸತ್ಯವೇ ಆಗುತ್ತಿತ್ತು. ಇದರಿಂದ "ಅವರು ದೇವರಿಗೆ ಬೇಕಾದ ದಾಸರು, ಅವರ ಮಾತು ಅಂದ್ರೆ ದೇವರ ಮಾತೇ ಸರಿ" ಅನ್ನುವಷ್ಟು ವಿಶ್ವಾಸ ಜನರಲ್ಲಿ ಉಂಟಾಯಿತು.

ಪ್ರಸನ್ನ ವೆಂಕಟದಾಸರಿಗೆ ನಾಲ್ಕಾರು ಜನ ಶಿಷ್ಯರಿದ್ದರು. ಅವರು ಪ್ರಯಾಣ ಮಾಡುವಾಗ ಒಂದು ಕುದುರೆಯ ಮೇಲೆ ದೇವರ ಪೆಟ್ಟಿಗೆ ಹಾಗೂ ಶಾಸ್ತ್ರಗ್ರಂಥಗಳನ್ನು ಹೇರಿಕೊಂಡು ಹೋಗುತ್ತಿದ್ದರು. ದಾರಿಯಲ್ಲಿ ಅಕಸ್ಮಾತ್ತಾಗಿ ಹುಲಿ ಏನಾದರೂ ಕಣ್ಣಿಗೆ ಬಿದ್ದರೆ ದಾಸರು ಆ ಹುಲಿಯನ್ನು ಕಿವಿಹಿಡಿದು ಎಳೆದುಕೊಂಡು ಬರುತ್ತಿದ್ದರಂತೆ. ಅದರ ಹಣೆಗೆ ಅಂಗಾರವನ್ನು ಹಚ್ಚಿ ತಮ್ಮ ದೇವರ ಪೆಟ್ಟಿಗೆಯನ್ನು ಅದರ ಮೇಲೆ ಹೊರಿಸಿ ಪ್ರಯಾಣ ಮಾಡುತ್ತಿದ್ದರು. ಆ ಹುಲಿಯು ಸಾಕಿದ ಪ್ರಾಣಿಯಂತೆ ದೇವರ ಪೆಟ್ಟಿಗೆ ಹೊತ್ತು ಹಿಂಬಾಲಿಸಿ ನಡೆಯುತ್ತಿತ್ತಂತೆ. ಊರು ಬಂದೊಡನೆಯೇ ದಾಸರು ದೇವರ ಪೆಟ್ಟಿಗೆ ತೆಗೆದುಕೊಂಡು ಹುಲಿರಾಯ! ಇನ್ನು ಮುಂದೆ ಊರ ಜನರಿಗೆ ಹಿಂಸೆ ಕೊಡಬೇಡ ಎಂದು ಹೇಳಿಕಳಿಸುತ್ತಿದ್ದರು. ಜ್ಞಾನಿಗಳು ತಮ್ಮ ತಪಃ ಪ್ರಭಾವದಿಂದ ಕ್ರೂರಮೃಗಗಳನ್ನು ಸಾಧು ಪ್ರಾಣಿಗಳನ್ನಾಗಿ ಮಾಡಿ ಬಿಡುತ್ತಾರೆಂಬುದು ಈ ಘಟನೆಯಿಂದ ಮನವರಿಕೆಯಾಗುತ್ತದೆ.

ಹೀಗೆ ಶ್ರೀಪ್ರಸನ್ನ ವೆಂಕಟದಾಸರು ಸುಮಾರು 71 ವರ್ಷಗಳ ಕಾಲ ತೀರ್ಥಯಾತ್ರೆ ಮಾಡುತ್ತ ತಮ್ಮ ಆಯುಷ್ಯವನ್ನು ಸಾರ್ಥಕಪಡಿಸಿಕೊಂಡರು. ಮುಂದೆ ತಮ್ಮ 72ನೆಯ ವಯಸ್ಸಿನಲ್ಲಿ ಶ್ರೀಹರಿಧ್ಯಾನ ಮಾಡುತ್ತ ವೈಕುಂಠವನ್ನು ಕುರಿತು ಪ್ರಯಾಣ ಬೆಳೆಸಿದರು.

ಅವರು ಬಾದಾಮಿಯಲ್ಲಿ ಧ್ಯಾನ ಮಾಡುತ್ತಿದ್ದ ಸ್ಥಳದಲ್ಲಿ ಈಗ ಒಂದು ಕಟ್ಟೆಯನ್ನು ಕಟ್ಟಿದ್ದಾರೆ. ಶ್ರೀದಾಸರು ತಮ್ಮ ಕೊನೆಯ ದಿನಗಳನ್ನು ಬಾದಾಮಿಯಲ್ಲಿ ಕಳೆದುದಾಗಿ ತಿಳಿದು ಬರುತ್ತದೆ. ಈ ಕಟ್ಟೆಯ ಮೇಲೆ "ಓಂ ಶ್ರೀಪ್ರಸನ್ನವೆಂಕಟದಾಸರಾಜೋ ವಿಜಯತೇಓಂ" ಎಂಬ ಅಕ್ಷರಗಳನ್ನು ಕೆತ್ತಿದ್ದಾರೆ.

ಶ್ರೀಪ್ರಸನ್ನವೆಂಕದಾಸರ ಸಾಹಿತ್ಯ ಸೃಷ್ಟಿ ವಿಪುಲವಾಗಿದೆ. ಇದುವರೆಗೆ ಅವರ ಅಂಕಿತದಲ್ಲಿ (ಪ್ರಸನ್ನವೆಂಕಟ, ಪ್ರಸನ್ನವೆಂಕಟಕೃಷ್ಣ) 449 ಕೃತಿಗಳು ದೊರೆತಿವೆ. ಅವರ ಒಟ್ಟು ಕೃತಿಗಳಲ್ಲಿ 6 ದೀರ್ಘಕೃತಿಗಳು, 426 ಸಣ್ಣ ಕೀರ್ತನೆಗಳು, 10 ಸುಳಾದಿಗಳು ಹಾಗೂ 7 ಉಗಾಭೋಗಗಳು ಇವೆ.

ಇವರು ತಮ್ಮ ಕೃತಿಗಳಲ್ಲಿ ಶ್ರೀಪುರಂದರದಾಸರ ಸರಣಿಯನ್ನು ಅನುಸರಿಸಿದ್ದಾರೆ. ಕೃತಿಗಳ ಭಾಷೆ ಹೊಸದಾದರೂ ವಿವಿಧ ವೃತ್ತ, ಬಂಧ, ಅಲಂಕಾರ ರಸಗಳಿಂದ ಪಂಡಿತರನ್ನು ಬೆರಗುಗೊಳಿಸುವಂತೆ ಇವೆ ಎಂಬುದು ಗಮನಾರ್ಹ.

ಹರಿದಾಸ ಸಾಹಿತ್ಯದ ದ್ವಿತೀಯ ಘಟ್ಟದ ದಾಸರಲ್ಲಿ ಪ್ರಸನ್ನವೆಂಕಟದಾಸರು ಪ್ರಮುಖರು. ತಮ್ಮ ಅಸಾಧಾರಣ ವ್ಯಕ್ತಿತ್ವ ಮತ್ತು ಕೃತಿಗಳಿಂದ ಇವರು ಅವಿಸ್ಮರಣೀಯರಾಗಿದ್ದಾರೆ.

ಇವರ ಕೃತಿಗಳನ್ನು 1. ದೇವತಾಸ್ತುತಿ 2. ಗುರುಸ್ತುತಿ 3. ಆತ್ಮ ನಿವೇದನೆ 4. ಲೋಕನೀತಿ 5. ತತ್ವವಿವೇಚನೆ 6. ಸಂಪ್ರದಾಯದ ಕೀರ್ತನೆಗಳು 7. ಇತರ ಕೀರ್ತನೆಗಳು ಎಂಬ ವಿಭಾಗಗಳಲ್ಲಿ ವಿಂಗಡಿಸಬಹುದು.

ಇವರ ಕೀರ್ತನೆಗಳ ವಿಶೇಷವಾದ ಅಧ್ಯಯನ ನಡೆಯಬೇಕಾಗಿದೆ. ಅದಕ್ಕೆ ಶ್ರೀಯುತ ಡಾ॥ ಸುಭಾಸ ಕಾಖಂಡಕಿ ಅವರು ಈಗ ಟೊಂಕಕಟ್ಟಿ ನಿಂತಿದ್ದಾರೆ. ಶ್ರೀಹರಿವಾಯುಗಳು ಆ ಕಾರ್ಯ ಮಾಡಿಸಲಿ ಎಂದು ಪ್ರಾರ್ಥಿಸುವೆ.



**ಶ್ರೀ ಪ್ರಸನ್ನವೆಂಕಟದಾಸಾರ್ಯ ವಿರಚಿತ**

## ನಾರಾಯಣ ಪಂಜರ

ನಾರಾಯಣಾಯ ನಮೋ ನಾರಾಯಣಾಯ ನಮೋ ।
ನಾರಾಯಣಾಯ ನಮೋ ನಾರಾಯಣ ॥
ನಾರದರ ಮುಖದಿಂದ ನರಕಸ್ಥರೆಬ್ಬಿಸಿದೆ
ನಾರಾಯಣಾಯ ನಮೋ ನಾರಾಯಣ ॥ ಪಲ್ಲ ॥

ಮತ್ತ ಕರಿಯವಸಾನಕಂಜಿ ಹರಿಯೇ ನೀ ಬಂದು ಕಾಯ್ದೆ ।
ನಾರಾಯಣಾಯ ನಮೋ ನಾರಾಯಣ
ಭಕ್ತ ಪ್ರಹ್ಲಾದನೇಕಾಂತ ನಿಷ್ಠೆಗೆ ಒಲಿದೆ
ನಾರಾಯಣಾಯ ನಮೋ ನಾರಾಯಣ ॥ ೧ ॥

ಪೃಥುವಿಗಳ್ಳನನಿರಿದು ಸತಿಯನುದ್ಧರಿಸಿದೆ ।
ನಾರಾಯಣಾಯ ನಮೋ ನಾರಾಯಣ
ಪೃಥು ಚಕ್ರವರ್ತಿಗೆ ಪ್ರತ್ಯಕ್ಷನಾಗ್ಯೊಲಿದೆ
ನಾರಾಯಣಾಯ ನಮೋ ನಾರಾಯಣ ॥ ೨ ॥

ಶೂಲಿಯನು ಬೆಂಬತ್ತಿ ಸುಡುವೆನೆಂಬನ ಸುಟ್ಟೆ ।
ನಾರಾಯಣಾಯ ನಮೋ ನಾರಾಯಣ
ಶೀಲವಿಡಿದಂಬರೀಷನ ಮತವ ಗೆಲಿಸಿದೆಯೊ
ನಾರಾಯಣಾಯ ನಮೋ ನಾರಾಯಣ ॥ ೩ ॥

ಮಕರರೂಪದಿ ಸತ್ಯವ್ರತಗೆ ತತ್ವವನೊರೆದೆ ।
ನಾರಾಯಣಾಯ ನಮೋ ನಾರಾಯಣ
ಮುಖದಿ ಶ್ರುತಿ ಪಿಡಿತಂದು ವಾರಿಜಾಸನಗಿತ್ತೆ ।
ನಾರಾಯಣಾಯ ನಮೋ ನಾರಾಯಣ ॥ ೪ ॥

ಪುರುಹೂತಗಖಿಳ ಪರಮಾರ್ಥವನು ಅರುಹಿದೆ ।
ನಾರಾಯಣಾಯ ನಮೋ ನಾರಾಯಣ
ಸುರಪನ್ನ ಭಯವಟ್ಟಿ ಧ್ರುವಗೆ ಧ್ರುವಪದವಿತ್ತೆ ।
ನಾರಾಯಣಾಯ ನಮೋ ನಾರಾಯಣ ॥ ೫ ॥

ಮಹಾಪಾಪನಿರತ ಅಜಾಮಿಳನನಿಷ್ಟಕರಿಸಿದೆ ।
ನಾರಾಯಣಾಯ ನಮೋ ನಾರಾಯಣ
ಮಹಿದಾಸನಾಗಿ ತಾಯಿಗೆ ತತ್ವನು ಪೇಳ್ದೆ ।
ನಾರಾಯಣಾಯ ನಮೋ ನಾರಾಯಣ ॥ ೬ ॥



ಮುನಿ ಕಾಲಲೊದೆಯೆ ಎದ್ದು ಕರುಣಿಸಿದೆ ಕರುಣಾನಿಧಿ ।
ನಾರಾಯಣಾಯ ನಮೋ ನಾರಾಯಣ
ಮುನಿವೆಂಗಳರೆಯಾಗೆ ಪದಸೋಂಕಿಸ್ಯೆತ್ತಿದೆಯೋ ।
ನಾರಾಯಣಾಯ ನಮೋ ನಾರಾಯಣ ॥ ೭ ॥

ಮಖವ ರಕ್ಷಿಸಿ ರಾಜಋಷಿಗಭೀಷ್ಟೆಯನಿತ್ತೆ ।
ನಾರಾಯಣಾಯ ನಮೋ ನಾರಾಯಣ
ಮಕರಧ್ವಜಾರಿ ಧನು ಮುರಿದವನಿಜೇಶ
ನಾರಾಯಣಾಯ ನಮೋ ನಾರಾಯಣ ॥ ೮ ॥

ಶುಭಕಪೀಶಗೆ ಅಭಯವರವಿತ್ತು ಕೈಪಿಡಿದೆ ।
ನಾರಾಯಣಾಯ ನಮೋ ನಾರಾಯಣ
ಶುಭಕಂಠನಂಜಿಕೆಯ ಹನುಮ ಹೇಳಲು ಕಳೆದೆ
ನಾರಾಯಣಾಯ ನಮೋ ನಾರಾಯಣ ॥ ೯ ॥

ಶರಣು ಹೊಕ್ಕಿರೆ ವಿಭೀಷಣಗರಸುತನ ಕೊಟ್ಟೆ ।
ನಾರಾಯಣಾಯ ನಮೋ ನಾರಾಯಣ
ಶರದಿ ರಾವಣನರಿದು ಸುರರ ಸಂಕಟ ಹರಿದೆ
ನಾರಾಯಣಾಯ ನಮೋ ನಾರಾಯಣ ॥ ೧೦ ॥

ಅನುಜನಗ್ನಿಗೆ ಧುಮುಕಲವಧಿ ಮೀರದೆ ಪೊರೆದೆ ।
ನಾರಾಯಣಾಯ ನಮೋ ನಾರಾಯಣ
ಅನಿಮಿಷರ ನಿಕರಕತಿ ಆಲ್ಹಾದ ಬೆಳೆಯಿಸಿದೆ
ನಾರಾಯಣಾಯ ನಮೋ ನಾರಾಯಣ ॥ ೧೧ ॥

ಉರಿನುಂಗಿ ಗಿರಿನೆಗಹಿ ವ್ರಜವ ಪಾಲನೆ ಮಾಡ್ದೆ ।
ನಾರಾಯಣಾಯ ನಮೋ ನಾರಾಯಣ
ಉರಗನೆಳೆತಂದವನ ರಾಣಿಯರ ಸ್ತುತಿಗೊಲಿದೆ
ನಾರಾಯಣಾಯ ನಮೋ ನಾರಾಯಣ ॥ ೧೨ ॥

ಕ್ರತುನಾರಿಯರನ್ನ ಸವಿದುಂಡು ಸುಖವಿತ್ತೆ ।
ನಾರಾಯಣಾಯ ನಮೋ ನಾರಾಯಣ
ಕ್ರತುಭೋಕ್ತೃ ಕ್ರತುಗಾತ್ರ ಕ್ರತುಪಾಲ ಕ್ರತುಶೀಲ
ನಾರಾಯಣಾಯ ನಮೋ ನಾರಾಯಣ ॥ ೧೩ ॥

ಗೋಪ ಸ್ತ್ರೀಯರ ಕುಚದಿ ನ್ಯಸ್ತ ಚರಣಾಬ್ಜಯುಗ ।
ನಾರಾಯಣಾಯ ನಮೋ ನಾರಾಯಣ
ಗೋಪೀ ಜನಜಾರ ನವನೀತ ದಧಿಚೋರ
ನಾರಾಯಣಾಯ ನಮೋ ನಾರಾಯಣ ॥ ೧೪ ॥



ವಂಶಗಾಯನಪ್ರಿಯ ವಿಧುಕುಲೋದ್ಭವ ಕೃಷ್ಣ ।
ನಾರಾಯಣಾಯ ನಮೋ ನಾರಾಯಣ
ವಂಶವರ್ಧಕ ಸುಜನ, ವಂಶಮರ್ದಕ ಕುಜನ
ನಾರಾಯಣಾಯ ನಮೋ ನಾರಾಯಣ ॥ ೧೫ ॥

ಅಕ್ರೂರವಂದ್ಯ ಕಂಸಾರಿ ಕುಬ್ಜಾರಮಣ ।
ನಾರಾಯಣಾಯ ನಮೋ ನಾರಾಯಣ
ಆಕ್ರಂದಿಸಿದ ತಂದೆ ತಾಯಿಯರ ಭಯವಳಿದೆ
ನಾರಾಯಣಾಯ ನಮೋ ನಾರಾಯಣ ॥ ೧೬ ॥

ಅದಿತಿ ಕುಂಡಲದಾತ ಭಗದತ್ತವರದನೆ
ನಾರಾಯಣಾಯ ನಮೋ ನಾರಾಯಣ
ಅಧಿಪತಿಗಳಧಿಪತಿಯೇ ಭೈಷ್ಮಿ ಸತ್ಯಾರಮಣ
ನಾರಾಯಣಾಯ ನಮೋ ನಾರಾಯಣ ॥ ೧೭ ॥

ಶಂಭುವಂದಿತಪಾದ ಸಾಂದೀಪೋದ್ಧವ ಪ್ರಿಯ ।
ನಾರಾಯಣಾಯ ನಮೋ ನಾರಾಯಣ
ಶಂಬರಾರಿಯ ಜನಕ ಯಜ್ಞ ಪೂಜಾಗ್ರಣಿಯೇ
ನಾರಾಯಣಾಯ ನಮೋ ನಾರಾಯಣ ॥ ೧೮ ॥

ಪಾಂಡವರ ಪ್ರಾಣ ದ್ರೌಪದಿ ಮಾನರಕ್ಷಕನೆ
ನಾರಾಯಣಾಯ ನಮೋ ನಾರಾಯಣ
ಪೌಂಡ್ರಕ ಶೃಗಾಲ ಕೌರವ ಭೂಮಿಭಾರಹರ
ನಾರಾಯಣಾಯ ನಮೋ ನಾರಾಯಣ ॥ ೧೯ ॥

ಅಭಿಮನ್ಯುನಾತ್ಮಜನ ಬಸುರೊಳಗೆ ಸಲಹಿದೆಯೊ ।
ನಾರಾಯಣಾಯ ನಮೋ ನಾರಾಯಣ
ಅಭಯದಲಿ ಪಾಂಡವರ ಸಂತತಿಯ ಬೆಳೆಸಿದೆಯೊ
ನಾರಾಯಣಾಯ ನಮೋ ನಾರಾಯಣ ॥ ೨೦ ॥

ಗರುಡ ಗಂಧರ್ವ ಕಿನ್ನರ ಗೀತ ಸಂಪ್ರೀತ ।
ನಾರಾಯಣಾಯ ನಮೋ ನಾರಾಯಣ
ಗರುವೆ ಲಕುಮಿಯ ಕೂಡ ಕ್ರೀಡಾದ್ರಿಯಲ್ಲಿರುವೆ
ನಾರಾಯಣಾಯ ನಮೋ ನಾರಾಯಣ ॥ ೨೧ ॥

ಶಂಖ ಚಕ್ರ ಗದಾಬ್ಜ ಶ್ರೀವತ್ಸ ಶೋಭಿತನೆ ।
ನಾರಾಯಣಾಯ ನಮೋ ನಾರಾಯಣ
ಸಂಖ್ಯೆ ರಹಿತಾಭರಣ ಭೂಷಣಾವ್ಯಾಕೃತನೆ
ನಾರಾಯಣಾಯ ನಮೋ ನಾರಾಯಣ ॥ ೨೨ ॥



ಮೀನ ಕಶ್ಯಪ ಪೋತ್ರಿ ನರಹರಿ ವಾಮನ ಭಾರ್ಗ್ವ ।
ನಾರಾಯಣಾಯ ನಮೋ ನಾರಾಯಣ
ಮಾನವಪ ಕೃಷ್ಣ ಬುದ್ಧ ಕಲ್ಕಿ ಕಪಿಲಾತ್ರೇಯ
ನಾರಾಯಣಾಯ ನಮೋ ನಾರಾಯಣ ॥ ೨೩ ॥

ಸ್ವಾಮಿ ತೀರ್ಥಾಂಬು ಅಂತರ್ಗಂಗಾಭಿಷಿಕ್ತ ।
ನಾರಾಯಣಾಯ ನಮೋ ನಾರಾಯಣ
ಸ್ವಾಮಿ ಭೂವರಾಹ ವೈಕುಂಠನಾಥ ವಿಶ್ವೇಶ
ನಾರಾಯಣಾಯ ನಮೋ ನಾರಾಯಣ ॥ ೨೪ ॥

ಷಟ್ಕೋಟಿ, ತೀರ್ಥಯುತಚರಣ ಶ್ರೀಭೂರಮಣ ।
ನಾರಾಯಣಾಯ ನಮೋ ನಾರಾಯಣ
ಷಟ್ಕಮಲನಿಲಯ ಚಿನ್ಮಯ ಚಿದ್ಗುಣಾರ್ಣವನೆ
ನಾರಾಯಣಾಯ ನಮೋ ನಾರಾಯಣ ॥ ೨೫ ॥

ಭಕ್ತಾಭಿಮಾನಿ ಭವದೂರ ಭಕ್ತರ ಪ್ರಭುವೆ
ನಾರಾಯಣಾಯ ನಮೋ ನಾರಾಯಣ
ಭಕ್ತವತ್ಸಲ ಕೃಪಾಂಬುಧಿ ಪರಾತ್ಪರ ಕೃಷ್ಣ
ನಾರಾಯಣಾಯ ನಮೋ ನಾರಾಯಣ ॥ ೨೬ ॥

ವಸುಧೆ ವೈಕುಂಠ ಮಂದಿರವಾಸ ಶ್ರೀನಿವಾಸ ।
ನಾರಾಯಣಾಯ ನಮೋ ನಾರಾಯಣ
ವಸುಪ್ರೀತ ವಸುಕರ್ತ ವಸುದಾತ ವಸುಪೂರ್ಣ
ನಾರಾಯಣಾಯ ನಮೋ ನಾರಾಯಣ ॥ ೨೭ ॥

ಆದಿನಾಥಪ್ರಮೇಯಾದಿ ಪುರುಷೋತ್ತಮನೆ ।
ನಾರಾಯಣಾಯ ನಮೋ ನಾರಾಯಣ
ಆದಿಮಧ್ಯಾಂತ ರಹಿತಾದ್ಯ ಮೂರುತಿ ವಿಷ್ಣು
ನಾರಾಯಣಾಯ ನಮೋ ನಾರಾಯಣ ॥ ೨೮ ॥

ಬದುಕಿಪ್ಪಾದರೆ ನಿನ್ನ ಹೊಗಳಿಕೆಲಿ ಬದುಕಿಸೈ ।
ನಾರಾಯಣಾಯ ನಮೋ ನಾರಾಯಣ
ಬುಧರ ಸಂಗತಿ ಕೊಟ್ಟು ಮನ್ನಿಸೆನ್ನನು ತಂದೆ
ನಾರಾಯಣಾಯ ನಮೋ ನಾರಾಯಣ ॥ ೨೯ ॥

ಕಿವಿಯಲ್ಲಿ ಮುಖದಲ್ಲಿ ನಿನ್ನ ನಾಮದ ನೆನೆವು ।
ನಾರಾಯಣಾಯ ನಮೋ ನಾರಾಯಣ
ಕವಲಾಗದಂತಿರಿಸಿ ತವ ಪಾದಾಬ್ಜವ ತೋರು
ನಾರಾಯಣಾಯ ನಮೋ ನಾರಾಯಣ ॥ ೩೦ ॥



ಭವಭವದಿ ತೊಳತೊಳಲಿ ಬಳಬಳಲಿ ಬಲುದಣಿದೆ ।
ನಾರಾಯಣಾಯ ನಮೋ ನಾರಾಯಣ
ಭವ ವಿರಿಂಚ್ಯಾದಿ ಕರಿಗಭಯದನೆ ನೀ ಸಲಹು
ನಾರಾಯಣಾಯ ನಮೋ ನಾರಾಯಣ ॥ ೩೧ ॥

ನೀ ತಾಯಿ ನೀ ತಂದೆ ನೀ ಬಂಧು ನೀ ಬಳಗ ।
ನಾರಾಯಣಾಯ ನಮೋ ನಾರಾಯಣ
ನೀತಿಗಳನರಿಯೆ ನಿನ್ನಯ ನಾಮವೆ ಗತಿಯು
ನಾರಾಯಣಾಯ ನಮೋ ನಾರಾಯಣ ॥ ೩೨ ॥

ತನು ನೆಚ್ಚಿಕಿಲ್ಲ ಚಿತ್ತದ ಗತಿಯು ನೀಟಿಲ್ಲ ।
ನಾರಾಯಣಾಯ ನಮೋ ನಾರಾಯಣ
ತನಯ ತರುಣಿ ಕೊನೆಯ ಸಂಗತಿಗೆ ಆರಿಲ್ಲ
ನಾರಾಯಣಾಯ ನಮೋ ನಾರಾಯಣ ॥ ೩೩ ॥

ದೋಷಗಳನರಸದೆನ್ನನು ಸಾಕು ಸಾಕಯ್ಯ ।
ನಾರಾಯಣಾಯ ನಮೋ ನಾರಾಯಣ
ದಾಸಪಾಲಕ ದೇವ ಡಿಂಗರರ ಸಂಜೀವ
ನಾರಾಯಣಾಯ ನಮೋ ನಾರಾಯಣ ॥ ೩೪ ॥

ನಿನ್ನ ಮೂರುತಿ ನೋಡಿ ನೋಡಿ ನೋಡಿ ನೋಡಿ ।
ನಾರಾಯಣಾಯ ನಮೋ ನಾರಾಯಣ
ನಿನ್ನ ಬಿಂಬವನೆಂದು ಕಂಡು ಕೊಂಡಾಡುವೆನೊ
ನಾರಾಯಣಾಯ ನಮೋ ನಾರಾಯಣ ॥ ೩೫ ॥

ನಿನ್ನ ಮೈ ಬೆಮರ್ಹೊಳೆಯಲ್ಲೆನ್ನ ಮುಳುಗಿಸಿ
ನಾರಾಯಣಾಯ ನಮೋ ನಾರಾಯಣ
ನಿನ್ನವ ನಾ ನಿನ್ನವರ ಕೈಲಿ ಕೊಡು ಗಡ ಗಡ
ನಾರಾಯಣಾಯ ನಮೋ ನಾರಾಯಣ ॥ ೩೬ ॥

ವಾರಿಯಲಿ ಸ್ಥಳದಲ್ಲಿ ಅಡವಿಯಲೆಲ್ಲೆಲ್ಲಿ ಕಾಯೊ ।
ನಾರಾಯಣಾಯ ನಮೋ ನಾರಾಯಣ
ವಾರಾಹ ವಾಮನ ನೃಸಿಂಹ ಕೇಶವ ಸ್ವಾಮಿ
ನಾರಾಯಣಾಯ ನಮೋ ನಾರಾಯಣ ॥ ೩೭ ॥

ಸತ್ಕುಲೋದ್ಭವನಾದೆ ಸನ್ಮಾರ್ಗರಿಯಲಿಲ್ಲ ।
ನಾರಾಯಣಾಯ ನಮೋ ನಾರಾಯಣ
ಸತ್ಕರ್ಮಗಳಿಗೆ ಬಹಿಷ್ಕೃತನಾಗಿ ಬಾಳುತಿಹೆ
ನಾರಾಯಣಾಯ ನಮೋ ನಾರಾಯಣ ॥ ೩೮ ॥



ಒಂದು ಜಾವದ ತಪ್ಪನೆಂದೆಂದಿಗುಣಲಾರೆ ।
ನಾರಾಯಣಾಯ ನಮೋ ನಾರಾಯಣ
ವಂದಿಸುವೆ ಸಾಷ್ಟಾಂಗ ತ್ರಾಹಿ ತ್ರಾಹಿ ಪಾಹಿ ತ್ರಾಹಿ
ನಾರಾಯಣಾಯ ನಮೋ ನಾರಾಯಣ ॥ ೩೯ ॥

ಮಧ್ವೇಶ ಮಧ್ವಪ್ರಿಯ ಮಧ್ವಮತ ಪರಿಪಾಲ
ನಾರಾಯಣಾಯ ನಮೋ ನಾರಾಯಣ
ಮಧ್ವಗುರು ಸ್ತುತ್ಯ ಮಧ್ವಾರ್ಚಿತ ಪದಾಬ್ಜ ಹರಿ
ನಾರಾಯಣಾಯ ನಮೋ ನಾರಾಯಣ ॥ ೪೦ ॥

ಏನರಿಯದವನಾನು ನೀನೆ ಪರಗತಿ ಎನಗೆ ।
ನಾರಾಯಣಾಯ ನಮೋ ನಾರಾಯಣ
ಪ್ರಾಣ ನಿನಗರ್ಪಿಸಿದೆ ಪ್ರಸನ್ನವೆಂಕಟಕೃಷ್ಣ
ನಾರಾಯಣಾಯ ನಮೋ ನಾರಾಯಣ ॥ ೪೧ ॥

* * *



# ನಾರಾಯಣ ಪಂಜರ

**ಶ್ರೀ ಪ್ರಸನ್ನವೆಂಕಟದಾಸರು**

ಶ್ರೀ ಪ್ರಸನ್ನವೆಂಕಟದಾಸರು ದಾಸ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರ. ಇದುವರೆಗೆ ಅವರ ಅಂಕಿತದಲ್ಲಿ (ಪ್ರಸನ್ನವೆಂಕಟ, ಪ್ರಸನ್ನವೆಂಕಟಕೃಷ್ಣ) ಒಟ್ಟು 449 ಕೃತಿಗಳು ದೊರೆತಿವೆ. ಇವುಗಳಲ್ಲಿ ಆರು ದೀರ್ಘಕೃತಿಗಳನ್ನು ರಚಿಸಿದ್ದಾರೆ. ಅವು ಹೀಗಿವೆ.

1. ಸತ್ಯಭಾಮಾವಿಲಾಸ
2. ನಾರಾಯಣ ಪಂಜರ
3. ಸಮಸ್ತನಾಮಮಣಿಗಣ ಷಟ್‌ಚರಣಮಾಲಾ
4. ಭೇದ ಮುಕ್ತಾವಲಿ
5. ನಾರದ ಕೊರವಂಜಿ
6. ಶ್ರೀ ಪ್ರಸನ್ನವೆಂಕಟದಾಸರ ಭಾಗವತ

ಇವುಗಳಲ್ಲಿ "ನಾರಾಯಣ ಪಂಜರ" ಕೃತಿಯು 41 ನುಡಿಗಳನ್ನು ಹೊಂದಿದೆ. ಇದರಲ್ಲಿ ನಾರಾಯಣಸ್ತುತಿ, ಅವತಾರಗಳ ಮಹಿಮೆಯು ಪ್ರಾರಂಭದ 28 ನುಡಿಗಳಲ್ಲಿ ಬಂದಿದೆ. ನಂತರ 29 ರಿಂದ 41 ನುಡಿಗಳಲ್ಲಿ ಅಂತರಂಗ ನಿವೇದನೆ, ಪ್ರಾರ್ಥನೆಗಳು ಚೆನ್ನಾಗಿ ಮೂಡಿ ಬಂದಿವೆ.

ಪ್ರಸ್ತುತ "ನಾರಾಯಣ ಪಂಜರ"ದ ವಿವೇಚನೆಯು ಇಲ್ಲಿ ಮೂಡಿ ಬರಲಿದೆ.

**ನಾರಾಯಣಾಯ ನಮೋ ನಾರಾಯಣಾಯ ನಮೋ**
**ನಾರಾಯಣಾಯ ನಮೋ ನಾರಾಯಣ ।**
**ನಾರದರ ಮುಖದಿಂದ ನರಕಸ್ಥರೆಬ್ಬಿಸಿದೆ**
**ನಾರಾಯಣಾಯ ನಮೋ ನಾರಾಯಣ ॥ಪ॥**

ನಾರಾಯಣನೇ ನಿನಗೆ ನಮಸ್ಕಾರ, ನಾರಾಯಣನೇ ನಿನಗೆ ನಮಸ್ಕಾರ, ನಾರದರು ಹಿಂದೆ "ನಾರಾಯಣ" ನಾಮವನ್ನು ಉಚ್ಚಾರಮಾಡಿ ನರಕದಲಿದ್ದ ಜನರನ್ನು ದುಃಖದಿಂದ ಪಾರುಮಾಡಿ ಸ್ವರ್ಗಕ್ಕೆ ಕಳಿಸಿಕೊಟ್ಟರು. "ನಾರಾಯಣ" ನಾಮದ ಮಹಿಮೆಯನ್ನು ಶ್ರೀದಾಸರು ಇಲ್ಲಿ ತಿಳಿಸಿಕೊಟ್ಟಿದ್ದಾರೆ.

**ವಿವರಣೆ : –** "ಆದರಾದ್ವಿರುಕ್ತಿಃ" ಎಂಬ ಉಕ್ತಿಯಂತೆ ಈ ಪದ್ಯದ ಪಲ್ಲದ ಮೊದಲನೆಯ ಎರಡನೆಯ ಹಾಗೂ ನಾಲ್ಕನೆಯ ಸಾಲಿನಲ್ಲಿ "ನಾರಾಯಣ" ಶಬ್ದವನ್ನು ಎರಡು ಸಾರೆ ಉಚ್ಚರಿಸಲಾಗಿದೆ. "ನಾರಾಯಣ" ನಾಮವನ್ನು ಆದರದಿಂದ ಉಚ್ಚರಿಸಬೇಕೆಂಬುದು ಶ್ರೀದಾಸರ ಆಶಯವಾಗಿದೆ.



"ನಾರಾಯಣ" ಶಬ್ದದ ಸಾರ್ಥಕತೆಯನ್ನು ಈಗ ನೋಡೋಣ – ಭಗವಂತನಿಗೆ "ನಾರಾಯಣ" ನಾಮವು ಔಚಿತ್ಯಪೂರ್ಣವಾಗಿ ಬಂದಿದೆ.

**ಆಪೋ ನಾರಾ ಇತಿ ಪ್ರೋಕ್ತಃ ಆಪೋ ವೈ ನರಸೂನವಃ ।**
**ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣ ಸ್ಮೃತಃ ॥**[1]

ನಾರಾ ಎಂದರೆ ನೀರು. ಅದಕ್ಕೆ ಆಶ್ರಯವಾಗಿ ಭಗವಂತನು ನೀರಲ್ಲಿ ಮಲಗಿದ್ದಾನೆ. ಕಾರಣ ಸಮುದ್ರಶಾಯಿಯಾದ ಭಗವಂತನಿಗೆ "ನಾರಾಯಣ" ಎಂದು ಹೆಸರು ಬಂದಿದೆ.

ಭಗವಂತನಿಗೆ "ನಾರಾಯಣ" ಎಂದು ಹೆಸರು ಎಂಬ ಇನ್ನೂ ಅನೇಕ ಕಾರಣಗಳುಂಟು.[2]

**1. ನಾರಾಃ ಮುಕ್ತಾಃ ತೇಷಾಂ ಅಯನಃ ನಾರಾಯಣಃ ।**

ಮುಕ್ತರಿಗೆ ಆಶ್ರಯನಾದುದರಿಂದ ಭಗವಂತನಿಗೆ **"ನಾರಾಯಣ"** ಎಂದು ಹೆಸರು.

**2. ಅರಾಣಾಂ ದೋಷಾಣಾಂ ವಿರುದ್ಧತ್ವಾತ್ ನಾರಾಃ ಗುಣಾಃ ।**
**ತೇಷಾಂ ಅಯನತ್ವಾತ್ ನಾರಾಯಣಃ ।**

ಗುಣಗಳಿಗೆ ಆಶ್ರಯನಾದುದರಿಂದ ಅಂದರೆ ಗುಣಪೂರ್ಣನಾದ್ದರಿಂದ ಅವನಿಗೆ "ನಾರಾಯಣ" ಎಂದು ಹೆಸರು ಬಂದಿದೆ.

**3. ನಾರಂ ಜ್ಞಾನಮ್ ತೇನ ನಾರೇಣ ಈಯತ ಇತಿ ನಾರಾಯಣಃ ।**

ಜ್ಞಾನ ವಿಷಯನಾದ್ದರಿಂದ ಭಗವಂತನಿಗೆ "ನಾರಾಯಣ"ನೆಂದು ಹೆಸರು.

**4. ನಾರಾ ಲಕ್ಷ್ಮೀ ತಸ್ಯಾಃ ಅಯನಂ ಆಶ್ರಯಃ ನಾರಾಯಣಃ ।**

ಲಕ್ಷ್ಮೀದೇವಿಯರಿಗೆ ಆಶ್ರಯನಾದ್ದರಿಂದ, ಪತಿಯಾದ್ದರಿಂದ ಅವನಿಗೆ "ನಾರಾಯಣ" ಎಂದು ಹೆಸರು.

**5. ನರಾಣಾಂ ಅಧಿಪತಿಃ ಮುಖ್ಯವಾಯುಃ ತದಾಶ್ರಯತ್ವಾತ್ ನಾರಾಯಣಃ ।**

ವಾಯುದೇವರಿಗೆ ಸ್ವಾಮಿಯಾದ್ದರಿಂದ ಭಗವಂತನಿಗೆ "ನಾರಾಯಣ"ನೆಂದು ಹೆಸರು.

ಹೀಗೆ ಮುಕ್ತಾಶ್ರಯನಾದ, ಗುಣಪೂರ್ಣನಾದ, ಜ್ಞಾನವಿಷಯನಾದ, ದೋಷ ದೂರನಾದ ವಾಯುದೇವರಿಗೆ ಸ್ವಾಮಿಯಾದ ನಾರಾಯಣನಿಗೆ ಮತ್ತೆ ಮತ್ತೆ ನಮಸ್ಕಾರ ಮಾಡುತ್ತಿದ್ದಾರೆ ಶ್ರೀದಾಸರು.

**ನಾರದರ ಮುಖದಿಂದ ನರಕಸ್ಥರೆಬ್ಬಿಸಿದೆ – ಎಂದಿದ್ದಾರೆ ಶ್ರೀ ದಾಸರು.**

---

1. ಅನುವ್ಯಾಖ್ಯಾನ (1–1–85)
2. ಶ್ರೀ ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥಕೃತ "ನಾರಾಯಣ" ಶಬ್ದಾರ್ಥ ಪುಸ್ತಕವನ್ನು ನೋಡಬಹುದು. (72 ಅರ್ಥಗಳನ್ನು ಅವರು "ನಾರಾಯಣ" ಪದಕ್ಕೆ ಕೊಟ್ಟಿರುವುದು ಗಮನಾರ್ಹ)



ಶ್ರೀ ಜಗನ್ನಾಥದಾಸರು ತಮ್ಮ "ಮೇರುಕೃತಿ" ಹರಿಕಥಾಮೃತಸಾರದಲ್ಲಿ – ಭಗವಂತನ ಪರಮ ಮಂಗಳಕರವಾದ ನಾಮವು "ನರಕಸ್ಥ"ರನ್ನು ಉದ್ಧರಿಸಿದ ವಿಷಯವನ್ನು ಹೀಗೆ ತಿಳಿಸಿದ್ದಾರೆ.

**ಶ್ರೀಮುಕುಂದನ ಪರಮ ಮಂಗಳ**
**ನಾಮ ನರಕಸ್ಥರನು ಸಲಹಿತು**
**ಪಾಮರರ ಪಂಡಿತರೆನಿಸಿ ಪುರುಷಾರ್ಥಕೊಡುತಿಹುದು॥**[3]

ಶ್ರೀ ನಾರದ ಮಹರ್ಷಿಗಳು ಭಗವಂತನ ನಾಮೋಚ್ಚಾರಣೆಯನ್ನು ಮಾಡಲು ಆ ನಾಮಸ್ಮರಣೆಯು ನರಕಸ್ಥರಾದ ಜೀವಿಗಳನ್ನು ಉದ್ಧರಿಸಿತು.

ಹಿಂದೆ ನಾರದರು ವೈಕುಂಠಕ್ಕೆ ಹೋಗಿ ಶ್ರೀನಾರಾಯಣನನ್ನು ಕಂಡು ಸ್ತುತಿಸಿ ಅವನಿಂದ ಆಜ್ಞೆ ತೆಗೆದುಕೊಂಡು ಯಮಪಟ್ಟಣಕ್ಕೆ ಬಂದರು. ಅಲ್ಲಿರುವ ಅತ್ಯದ್ಭುತವಾದ ನರಕಯಾತನೆಯನ್ನು ಕಂಡು ಕೃಪಾಯುಕ್ತವಾದ ಮನಸ್ಸಿನಿಂದ – ಹೀಗೆ ನುಡಿದರು.

**"ನಾರಾಯಣ"** ವೆಂಬ ಮಂತ್ರವಿದೆ. ನಾಲಿಗೆ ವಶದಲ್ಲಿದೆ. ಇಂಥ ನಾರಾಯಣ ಮಂತ್ರವಿದ್ದರೂ ಅದನ್ನು ಉಚ್ಚರಿಸದೇ ಘೋರನರಕದಲ್ಲಿ ಜನರು ಯಾತನೆಯನ್ನು ಅನುಭವಿಸುತ್ತಿದ್ದಾರೆ. ಇದು ಆಶ್ಚರ್ಯವೇ ಸರಿ.[4]

ಆಗ ಶ್ರೀ ನಾರದರು "ಪಾಪಿಗಳಿಗೆ ಭಗವಂತನ ನಾಮವೇ ಗತಿ ಅದನ್ನು ಬಿಟ್ಟು ಬೇರೆ ಗತಿಯೇ ಇಲ್ಲ" ಎಂಬುದಾಗಿ ವಿಚಾರಿಸಿ ಅಲ್ಲಿರುವ ಜನರ ಮೇಲೆ ಕನಿಕರದಿಂದ ತಮ್ಮ ಸುಸ್ವರವಾದ ವೀಣೆಯನ್ನು ನುಡಿಸುತ್ತ 'ಗೋವಿಂದ'ನ ನಾಮ ಸಂಕೀರ್ತನೆಯನ್ನು ಮಾಡಿದರು.

**ಓಂ. ಗೋವಿಂದ ನಾರಾಯಣ ವಾಸುದೇವ ಮುಕುಂದ ಕೃಷ್ಣಾಚ್ಯುತ ಮಾಧವೇತಿ।**
**ನೃಸಿಂಹ ದೇವೇಶ ಹರೇ ಮುರಾರೇ ರಮೇಶ ಲೋಕೇಶ ಜಗನ್ನಿವಾಸ ॥**
**ಅನಂತ ವೈಕುಂಠ ದುರಂತ ಶಕ್ತೇ ಸಮಸ್ತ ಲೋಕಸ್ಯ ನಿದಾನಮೂತೇ।**
**ನಿರಂಜನಾನಂತ ಗುಣಾಕರೇಶ ಚಿದ್ರೂಪ ನಿರ್ದೋಷ ಜಗದ್ವಿಹಾರ ॥**
**ನಿರೂಪ ನಿತ್ಯಾವ್ಯಯ ನಿರ್ವಿಕಾರ ನಿರಾಶ್ರಯಾನಂತ ವಿಚಿತ್ರಕರ್ಮನ್ ।**
**ದಾಶಾರ್ಹಕೃಷ್ಣ ಖಗವಾಹನ ವಾರಿಜಾಕ್ಷ ನಾರಾಯಣಾಖಿಲ ಗುರೋ ಜಗತಾಮಧೀಶ॥**
**ವಿಶ್ವೋದಯಸ್ಥಿತಿ ಲಯೋನ್ನಿಯತಿಪ್ರದೇತಿ**
**ಗಾಯನ್ಮುಮೋದ ಮುದಮಾಪಿತವಾನ್ ಜನಾನಾಂ ॥**
**ತಚ್ಛ್ರುತ್ವಾ ನರಕಸ್ಥಾಸ್ತೇ ಹರೇರ್ನಾಮಾಮೃತಂ ಶುಭಂ ।**

---

3. ಶ್ರೀಹರಿಕಥಾಮೃತಸಾರ – ಕರುಣಾಸಂಧಿ (2–21)
4. ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನಿ ।
ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥ (ಶ್ರೀಕೃಷ್ಣಾಮೃತ ಮಹಾರ್ಣವ 64ನೆಯ ಶ್ಲೋಕ.



**ಉತ್ತಸ್ಥುರ್ಯಾತನಾ ಸ್ಥಾನಾತ್ ಮುಕ್ತಪಾಪಾಶ್ಚಸರ್ವಶಃ ॥**
**ತತ್ಕ್ಷಣಾತ್ ಪುಷ್ಪಕಾರೂಢಾ ದಿವ್ಯರೂಪಾ ಮನೋರಮಾಃ।**
**ದಿವಂ ಜಗ್ಮುಃ ಪ್ರಾಂಜಲಯಃ ಸ್ತುವಂತೋ ನಾರದಂ ಮುನಿಮಿತಿ॥** [5]

ಹೀಗೆ "ನಾರಾಯಣ" ನಾಮವು ನರಕಸ್ಥರಾದ ಜನರನ್ನು ನರಕದಿಂದ – ಪಾರು ಮಾಡಿ ಸ್ವರ್ಗಕ್ಕೆ ಕಳಿಸಿಕೊಟ್ಟಿರುವುದು ಗಮನಾರ್ಹವಾಗಿದೆ.

**ಮತ್ತಕರಿಯವಸಾನಕೆ ಹರಿಯೇ ನೀ ಬಂದು ಕಾಯ್ದೆ**
**ನಾರಾಯಣಾಯ ನಮೋ ನಾರಾಯಣ ।**
**ಭಕ್ತ ಪ್ರಹ್ಲಾದನೇಕಾಂತ ನಿಷ್ಠೆಗೆ ಒಲಿದೆ**
**ನಾರಾಯಣಾಯ ನಮೋ ನಾರಾಯಣ ॥1॥**

ಮದಿಸಿದ ಆನೆಯು (ಗಜೇಂದ್ರವು) ಮೊಸಳೆಯ ಬಾಯಿಗೆ ಸಿಕ್ಕು ಪ್ರಾಣಸಂಕಟದಲ್ಲಿ ಸಿಲುಕಿದಾಗ ಶ್ರೀಹರಿಯೇ ನೀನು ಬಂದು ಆ ಗಜೇಂದ್ರನನ್ನು ರಕ್ಷಣೆ ಮಾಡಿದೆ. ಅಂಥ ನಾರಾಯಣನೇ ನಿನಗೆ ನಮಸ್ಕಾರವು. ಭಕ್ತ ಪ್ರಹ್ಲಾದನ ಏಕಾಂತ ನಿಷ್ಠೆಗೆ ನೀನು ಒಲಿದು ಸ್ತಂಭದಿಂದ ಹೊರಬಂದು ತಂದೆಯಾದ ಹಿರಣ್ಯಕಶಿಪುವನ್ನು ಸಂಹಾರ ಮಾಡಿ ಅವನನ್ನು ರಕ್ಷಿಸಿರುವಿ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ –**

ಹಿಂದೆ ತಾಪಸ ಮನ್ವಂತರದಲ್ಲಿ ಶ್ರೀಹರಿಯು ಗಜೇಂದ್ರನನ್ನು ಮೊಸಳೆಯ ಬಾಯಿಂದ ರಕ್ಷಿಸಿದ ವಿಷಯವು ಶ್ರೀಮದ್ ಭಾಗವತದಲ್ಲಿ ಉಕ್ತವಾಗಿದೆ.[6]

**ಸೋಽಂತಃ ಸರಸ್ಯುರುಬಲೇನ ಗೃಹೀತ ಆರ್ತೋ**
**ದೃಷ್ಟ್ವಾ ಗರುತ್ಮತಿ ಹರಿಂ ಖ ಉಪಾತ್ತಚಕ್ರಮ್ ।**
**ಉತ್ಕ್ಷಿಪ್ಯ ಸಾಂಬುಜಕರಂ ಗಿರಮಾಹಕೃಚ್ಛ್ರಾತ್**
**ನಾರಾಯಣಾಖಿಲಗುರೋ ಭಗವನ್ನಮಸ್ತೇ ॥**

**ತಂ ವೀಕ್ಷ್ಯ ಪೀಡಿತಮಜಃ ಸಹಸಾವತೀರ್ಯ**
**ಸ ಗ್ರಾಹಮಾಶು ಸರಸಃ ಕೃಪಯೋಜ್ಜಹಾರ ।**
**ಗ್ರಾಹಾದ್ವಿಪಾಟಿತಮುಖಾದರಿಣಾ ಗಜೇಂದ್ರಂ**
**ಸಂಪಶ್ಯತಾಂ ಹರಿರಮೂಮುಚದುಸ್ರಿಯಾಣಾಂ ॥**

ಶ್ರೀಹರಿಯು ಗಜೇಂದ್ರನನ್ನು ರಕ್ಷಿಸಿದ ಪ್ರಸಂಗ ಹೀಗಿದೆ –

---

5. ಶಾಂಡಿಲ್ಯತತ್ವ – 22ನೆಯ ಅಧ್ಯಾಯ
6. ಶ್ರೀಮದ್ ಭಾಗವತ ಅಷ್ಟಮಸ್ಕಂಧ – (3–30) ಮತ್ತು (3–31)



ಬಿಸಿಲಿನ ತಾಪದಿಂದ ಬಳಲಿದ ಗಜೇಂದ್ರನು ತನ್ನ ಬಾಯಾರಿಕೆಯನ್ನು ಹಿಂಗಿಸಿಕೊಳ್ಳಲು "ಋತುಮತ್" ಎಂಬ ಹೆಸರಿನ ಉದ್ಯಾನದಲ್ಲಿರುವ ಸರೋವರಕ್ಕೆ ಬರುತ್ತಾನೆ. ಸರೋವರದಲ್ಲಿ ಸ್ನಾನಮಾಡಿ ತೃಪ್ತಿಯಾಗುವಷ್ಟು ನೀರನ್ನು ಕುಡಿದು ಮೇಲೆ ಬರುವಷ್ಟರಲ್ಲಿ ಮೊಸಳೆಯೊಂದು ಗಜೇಂದ್ರನ ಕಾಲನ್ನು ಹಿಡಿದುಬಿಡುತ್ತದೆ. ಗಜೇಂದ್ರನನ್ನು ಮೊಸಳೆಯ ಬಾಯಿಂದ ಬಿಡಿಸಲು ಬಂಧುಗಳೆಲ್ಲರೂ ಮಾಡಿದ ಪ್ರಯತ್ನ ವಿಫಲವಾಗುತ್ತದೆ. ಆಗ ಗಜೇಂದ್ರನು ಮುಕ್ತಾಶ್ರಯನಾದ, ಸರ್ವೋತ್ತಮನಾದ ಭಗವಂತನನ್ನು ಶರಣು ಹೋಗುತ್ತಾನೆ.

"ತಂ ಯಾಮಿ ಪರಂ ಪರಾಯಣಮ್" ಎಂಬಂತೆ ಗಜೇಂದ್ರನು ಆಕಾಶದಲ್ಲಿ ಚಕ್ರವನ್ನು ಧರಿಸಿದ, ಗರುಡಾರೂಢನಾದ ಶ್ರೀಹರಿಯನ್ನು ನೋಡಿ, ಕಮಲಪುಷ್ಪವನ್ನು ಹಿಡಿದಿದ್ದ ಸೊಂಡಿಲನ್ನು ಮೇಲಕ್ಕೆತ್ತಿ, ಗುಣಪೂರ್ಣನಾದ, ಸಮಗ್ರ ಐಶ್ವರ್ಯ ಸಂಪನ್ನನಾದ, ಸಮಸ್ತರಿಗೂ ಗುರುವಾದ ಶ್ರೀಹರಿಯೇ ನಿನಗೆ ನಮಸ್ಕಾರವು (ನಾರಾಯಣಾಖಿಲಗುರೋ ಭಗವನ್ನಮಸ್ತೇ) ಎಂಬುದಾಗಿ ಪ್ರಯಾಸದಿಂದ ನುಡಿದನು. ಆಗ ಉತ್ಪತ್ತಿ ರಹಿತನಾದ, ದೋಷರಹಿತನಾದ, ಶ್ರೀಹರಿಯು ಸೊಂಡಿಲಿನಲ್ಲಿ ಪುಷ್ಪವನ್ನು ಹಿಡಿದು ನಮಸ್ಕರಿಸಿದ ಗಜೇಂದ್ರನನ್ನು ನೋಡಿ ಕೂಡಲೇ ಗರುಡನಿಂದಿಳಿದು ಕರುಣೆಯಿಂದ ಮೊಸಳೆ ಹಾಗೂ ಆನೆಯನ್ನು ಸರೋವರದಿಂದ ಎತ್ತಿ, ದೇವತೆಗಳು ನೋಡುತ್ತಿರುವಂತೆಯೇ ಚಕ್ರದಿಂದ ಮೊಸಳೆಯ ಬಾಯಿಯನ್ನು ಸೀಳಿ ಗಜೇಂದ್ರನನ್ನು ಮುಕ್ತನನ್ನಾಗಿ ಮಾಡಿ ರಕ್ಷಿಸಿದನು.

ಇನ್ನು ಭಕ್ತ ಪ್ರಹ್ಲಾದನೇಕಾಂತ ನಿಷ್ಠೆಗೆ ಒಲಿದು ರಕ್ಷಿಸಿದ ಪ್ರಸಂಗವು ಸಪ್ತಮಸ್ಕಂಧ ಭಾಗವತದಲ್ಲಿ ಉಕ್ತವಾಗಿದೆ.

ಹಿರಣ್ಯಕಶಿಪುವಿಗೆ ನಾಲ್ಕು ಜನ ಮಕ್ಕಳಿದ್ದರು. ಈ ನಾಲ್ವರಲ್ಲಿ ಪ್ರಹ್ಲಾದರಾಜರು ಜ್ಯೇಷ್ಠರು. ಅವರು ಶೀಲವಂತರು, ಸತ್ಯಪ್ರತಿಜ್ಞರು, ಜಿತೇಂದ್ರಿಯರು ಹಾಗೂ ಮಹಾ ಭಗವದ್ಭಕ್ತರಾಗಿದ್ದರು. ಬಾಲಕರಾದ ಪ್ರಹ್ಲಾದರಾಜರು ಆಟಪಾಟಗಳನ್ನು ಬಿಟ್ಟು ಶ್ರೀಹರಿಯ ಧ್ಯಾನವನ್ನೇ ಮಾಡುತ್ತಿದ್ದರು. "ಕೃಷ್ಣಗ್ರಹ ಗೃಹೀತಾತ್ಮ" ಉಕ್ತಿಯಂತೆ ಶ್ರೀಹರಿಯೆಂಬ ಗ್ರಹದಿಂದ ಏಕೀಕೃತ ಮನಸ್ಸುಳ್ಳವರಾಗಿದ್ದರು.

ಜೊತೆಯ ಬಾಲಕರು ಪ್ರಹ್ಲಾದರಾಜರನ್ನು ಆಟಕ್ಕೆ ಕರೆದಾಗ ಅವರನ್ನು ಕುರಿತು "ಶ್ರೀಹರಿಯ ಪ್ರೀತಿಯನ್ನು ಉದ್ದೇಶಿಸಿ ಬಾಲಕರಿದ್ದಾಗಲೇ ಭಾಗವತ ಧರ್ಮಗಳನ್ನು ಆಚರಿಸಬೇಕು". ಎಂಬುದಾಗಿ ಉಪದೇಶ ಮಾಡುತ್ತಿದ್ದರು.[7]

ಅವರ ಗುರುಗಳಾದ ಶಂಡಾಮರ್ಕರು ಪ್ರಹ್ಲಾದರಾಜರ ನುಡಿಗಳನ್ನು ಕೇಳಿ ರಾಜ ಹಿರಣ್ಯಕಶಿಪುವಿನ ಹತ್ತಿರ ಹೋಗಿ ಈ ವಿಷಯವನ್ನು ತಿಳಿಸಿದರು. ಆಗ ಹಿರಣ್ಯಕಶಿಪುವು ಸಿಟ್ಟಿನಿಂದ "ಎಲ್ಲರ ಬುದ್ಧಿಯನ್ನು ಕೆಡಿಸುವ ನಿನ್ನನ್ನು ಯಮಸದನಕ್ಕೆ ಈಗಲೇ ಸೇರಿಸುವೆ" ಎಂದು ಜಬರಿಸುತ್ತ ಪ್ರಹ್ಲಾದರಾಜರನ್ನು ಕುರಿತು "ನನ್ನ ಶಾಸನವನ್ನು ಅತಿಕ್ರಮಿಸುವ ನಿನಗೆ ಯಾರು ಬಲ? ಎಂದು ಕೇಳಿದನು.

7. ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ ॥ ಸಪ್ತಮಸ್ಕಂಧ ಭಾಗವತ (7–6–1)



ಆಗ ಪ್ರಹ್ಲಾದರಾಜರು "ರಾಜನೇ! ನನಗೂ ನಿನಗೂ ಬ್ರಹ್ಮಾದಿ ಎಲ್ಲ ಸ್ಥಾವರ ಜಂಗಮ ಜಗತ್ತಿಗೆ ಶ್ರೀಹರಿಯೇ ಬಲಪ್ರದನು. ಎಲ್ಲವೂ ಅವನ ವಶದಲ್ಲಿದೆ[8] ಈ ಸಮಸ್ತ ಜಗತ್ತಿಗೆ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಮಾಡುವವನು ಅವನೇ" ಎಂದು ತಿಳಿಸಿದರು.

ಹಿರಣ್ಯಕಶಿಪುವು ಎಲೋ ಮಂದಭಾಗ್ಯ! ನೀನು ಹೇಳುವ ಆ ಹರಿ ಎಲ್ಲಿದ್ದಾನೆ? ಅವನೇಕೆ ಕಾಣುತ್ತಿಲ್ಲ. ಈ ಸ್ತಂಭದಲ್ಲಿ ಏಕೆ ಕಾಣುವದಿಲ್ಲ? ನಾನೇ ಜಗನ್ನಿಯಾಮಕ. ನೀನು ಅಸಂಗತವಾಗಿ ಬೊಗಳುತ್ತಿರುವಿ. ನಿನ್ನ ತಲೆಯನ್ನು ದೇಹದಿಂದ ಕಿತ್ತೊಗೆಯುವೆ.

ನೀನು ಹೇಳುತ್ತಿರುವ ಆ ಶ್ರೀಹರಿ ನಿನ್ನನ್ನು ರಕ್ಷಿಸಲಿ ಎನ್ನುತ್ತ ಅಲ್ಲಿದ್ದ ಸಭಾಸ್ತಂಭವನ್ನು ತನ್ನ ಮುಷ್ಟಿಯಿಂದ ಜೋರಾಗಿ ಬಡಿದನು. ಕೂಡಲೇ ಭಯಂಕರವಾದ ಶಬ್ದ ಮಾಡುತ್ತ ತನ್ನ ಭೃತ್ಯರಾದ ಬ್ರಹ್ಮದೇವರ ವರವನ್ನು, ಏಕಾಂತ ಭಕ್ತರಾದ ಪ್ರಹ್ಲಾದರಾಜರ ಮಾತನ್ನು ಸತ್ಯವನ್ನಾಗಿ ಮಾಡಲು ಶ್ರೀನರಸಿಂಹದೇವರು ಸ್ತಂಭದಿಂದ ವ್ಯಕ್ತರಾದರು.[9]

ಶ್ರೀನರಸಿಂಹದೇವರು ಗರುಡನು ವಿಷಪೂರಿತ ಸರ್ಪವನ್ನು ಕೊಕ್ಕಿನಿಂದ ಸೀಳಿ ಹಾಕುವಂತೆ ಹೊಸ್ತಿಲಲ್ಲಿ ಕುಳಿತು ತೊಡೆಯ ಮೇಲೆ ಆ ದೈತ್ಯನನ್ನು ಹಾಕಿಕೊಂಡು ಲೀಲಾಜಾಲವಾಗಿ ಉಗುರುಗಳಿಂದ ಅವನ ವಕ್ಷಸ್ಥಲವನ್ನು ಬಗೆದು ಸಂಹರಿಸಿ ಪ್ರಹ್ಲಾದರಾಜರನ್ನು ರಕ್ಷಿಸಿದರು.

ಇಂಥ ನಾರಾಯಣರೂಪೀ ಭಗವಂತನೇ ನಿನಗೆ ನಮಸ್ಕಾರ ಎಂಬುದಾಗಿ – ಶ್ರೀ ಪ್ರಸನ್ನವೆಂಕಟದಾಸರು ಇಲ್ಲಿ ಹೇಳುತ್ತಿದ್ದಾರೆ.

**ಪೃಥುವಿಗಳ್ಳ ನನಿರಿದು ಸತಿಯನುದ್ಧರಿಸಿದೆ**
**ನಾರಾಯಣಾಯ ನಮೋ ನಾರಾಯಣ ।**
**ಪೃಥುಚಕ್ರವರ್ತಿಗೆ ಪ್ರತ್ಯಕ್ಷನಾಗ್ಯೊಲಿದೆ**
**ನಾರಾಯಣಾಯ ನಮೋ ನಾರಾಯಣ ॥ 2 ॥**

ಹಿಂದೆ ಪೃಥ್ವಿಯನ್ನು ಅಪಹರಿಸಿದ ಹಿರಣ್ಯಾಕ್ಷನನ್ನು ಭಗವಂತನು ವರಾಹರೂಪದಿಂದ ಸಂಹರಿಸಿದ, ಭೂದೇವಿಯನ್ನು ಉದ್ಧರಿಸಿದ ಅಂಥ ನಾರಾಯಣನೇ ನಿನಗೆ ನಮಸ್ಕಾರವು. ಹಾಗೆಯೇ ಪೃಥು ಚಕ್ರವರ್ತಿಯ ಭಕ್ತಿಗೆ ಒಲಿದು ಪ್ರತ್ಯಕ್ಷನಾಗಿ ಬಂದು ವರಗಳನ್ನಿತ್ತು ಅನುಗ್ರಹಿಸಿದ ಆ ನಾರಾಯಣರೂಪೀ ಭಗವಂತನೇ ನಿನಗೆ ನಮಸ್ಕಾರವು.

ಪೃಥ್ವಿಯನ್ನು ಅಪಹರಿಸಿದ ಹಿರಣ್ಯಾಕ್ಷನನ್ನು ನಾರಾಯಣನು ವರಾಹರೂಪದಿಂದ ಸಂಹರಿಸಿದ ವಿಷಯ ಹೀಗಿದೆ.[10]

8. ನ ಕೇವಲಂ ಮೇ ಭವತಶ್ಚ ರಾಜನ್ ಸವೈ ಬಲಂ ಬಲಿನಾಂ ಚಾಪರೇಷಾಮ್ ।
ಪರಾವರೇಮೀ ಸ್ಥಿರಜಂಗಮಾಯೇ ಬ್ರಹ್ಮಾದಯೋ ಯೇನ ವಶಂ ಪ್ರಣೀತಾಃ ॥" (7–8–8)

9. ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತ ರೂಪಮುದ್ವಹನ್ ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥ (7–8–18)

10. ತೃತೀಯ ಸ್ಕಂಧ ಭಾಗವತ ತಾತ್ಪರ್ಯ.



**ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ ।**
**ಸ ಏವ ಪಾರ್ಷದಾವಿಷ್ಟಃ ದ್ವಿತೀಯಃ ಕರ್ಣತಾಡನಾತ್ ॥**
**ಪೂರ್ವಂ ಲಯೋದಕೇ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಂ ।**
**ಭುವಮುದ್ಧರತೈವಾಸೌ ಹರಿಣಾ ಕ್ರೋಡಮೂರ್ತಿನಾ॥ ಇತಿಬ್ರಹ್ಮಾಂಡೇ**

ಬ್ರಹ್ಮನಿಂದ ಹುಟ್ಟಿದ ಹಿರಣ್ಯಾಕ್ಷನೇ ಮೊದಲು ವರಾಹದೇವರ ಕೋರೆದಾಡೆ (ಹಲ್ಲಿನಿಂದ) ಯಿಂದ ಕೊಲ್ಲಲ್ಪಟ್ಟನು. ಅವನೇ ವಿಜಯನೆಂಬ ಶ್ರೀಹರಿಯ ದ್ವಾರಪಾಲಕನಲ್ಲಿ ಆವಿಷ್ಟನಾದನು. ಅವನನ್ನು ವರಾಹರೂಪೀ ಭಗವಂತನು ಕಿವಿಯ ಮೂಲದಲ್ಲಿ ಹೊಡೆದು ಕೊಂದನು. ಪೂರ್ವದಲ್ಲಿ ಪ್ರಳಯ ಜಲದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸುವ ವರಾಹರೂಪೀ ಶ್ರೀಹರಿಯಿಂದ ಬ್ರಹ್ಮಜನಾದ ಹಿರಣ್ಯಾಕ್ಷನು ಸಂಹರಿಸಲ್ಪಟ್ಟನು. ಎರಡನೆಯ ಬಾರಿಗೆ ಹಿರಣ್ಯಾಕ್ಷನು ಭೂಮಿಯನ್ನು ಅಪಹರಿಸಿ ಸಮುದ್ರದಲ್ಲಿ ಮುಳುಗಿಸಿದ್ದನು. ವರಾಹರೂಪೀ ಭಗವಂತನು ಈ ಭೂಮಿಯನ್ನು ಮೇಲಕ್ಕೆ ತರುವಾಗ ಹಿರಣ್ಯಾಕ್ಷನು ವರಾಹರೂಪೀ ಹರಿಯ ಕೈಯಿಂದ ಹೊಡೆಸಿಕೊಂಡು ಸತ್ತನು. ಹೀಗೆ ಹಿರಣ್ಯಾಕ್ಷನನ್ನು ಸಂಹರಿಸಿ ಭೂದೇವಿಯನ್ನು ಉದ್ಧರಿಸಿದ ವಿಷಯವನ್ನು ಶ್ರೀದಾಸರು ಇಲ್ಲಿ ಉಲ್ಲೇಖಿಸಿದ್ದಾರೆ.

ಆ ನಾರಾಯಣನು ಪೃಥುಚಕ್ರವರ್ತಿಗೆ ಪ್ರತ್ಯಕ್ಷನಾಗಿ ವರಕೊಟ್ಟ ಪ್ರಸಂಗವು ಚತುರ್ಥಸ್ಕಂಧ ಭಾಗವತದಲ್ಲಿ ಉಕ್ತವಾಗಿದೆ.

ಪೃಥುಚಕ್ರವರ್ತಿಯು ಬ್ರಹ್ಮಾವರ್ತವೆಂಬ ಪ್ರದೇಶದಲ್ಲಿ ನೂರು ಅಶ್ವಮೇಧಯಾಗಗಳನ್ನು ಮಾಡಬೇಕೆಂದು ಸಂಕಲ್ಪಿಸಿ ದೀಕ್ಷೆಯನ್ನು ಕೈಗೊಂಡನು.

ಅವನು 99 ಅಶ್ವಮೇಧ ಯಾಗಗಳನ್ನು ಮುಗಿಸಿ ನೂರನೆಯ ಯಾಗವನ್ನು ನಡೆಸುತ್ತಿರುವಾಗ ಅಸೂಯೆಗೊಂಡ ಇಂದ್ರದೇವರು ಯಾಗಾಶ್ವವನ್ನು ಅಪಹರಿಸಿ ಬಿಡುತ್ತಾರೆ. ಈ ಸಮಯದಲ್ಲಿ ಕೋಪಗೊಂಡ ಪೃಥುರಾಜರನ್ನು ಅತ್ರಿಮೊದಲಾದ ಮಹರ್ಷಿಗಳು ಸಮಾಧಾನ ಪಡಿಸಿ, ತಮ್ಮ ಮಂತ್ರ ಬಲದಿಂದಲೇ ಇಂದ್ರನನ್ನು ಕರೆಸಿ ಅವನನ್ನು ಹೋಮ ಮಾಡಿ ಬಿಡುತ್ತೇವೆ ಎಂದು ಹೇಳಿ, ಹೋಮ ಮಾಡಲು ಉದ್ಯುಕ್ತರಾದಾಗ ಬ್ರಹ್ಮದೇವರು ಬಂದು ಅವನನ್ನು ತಡೆಯುತ್ತಾರೆ. ಆಗ ಯಜ್ಞಪತಿಯೂ, ಯಜ್ಞಭೋಕ್ತೃವೂ ಆದ ಭಗವಾನ್ ವಿಷ್ಣುವು ಪೃಥುರಾಜನ ಯಜ್ಞಗಳಿಂದ ಸಂತುಷ್ಟನಾಗಿ ಇಂದ್ರ ದೇವರೊಡನೆ ಅಲ್ಲಿಗೆ ಪ್ರತ್ಯಕ್ಷವಾಗಿ ಬರುತ್ತಾನೆ. ಪೃಥುರಾಜನು ವಿಷ್ಣುವನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಆ ಭಗವಂತನ ಅಡಿದಾವರೆಗಳಿಗೆ ನಮಸ್ಕರಿಸುತ್ತಾನೆ ಮತ್ತು ಭಗವಂತನನ್ನು ಕುರಿತು ಹೇಳುತ್ತಾನೆ – ಕೈವಲ್ಯಪತಿಯಾದ ಪ್ರಭುವೇ! ವರಗಳನ್ನು ಕೊಡುವ ಬ್ರಹ್ಮಾದಿ ದೇವತೆಗಳಿಗೂ ವರವನ್ನು ಕೊಡುವುದರಲ್ಲಿ ಸಮರ್ಥನಾಗಿರುವಿ. ನನಗೆ ನಿನ್ನ ಕೀರ್ತಿ ಕಥೆಗಳನ್ನು ಕೇಳುವ ಸುಖವು ಸಿಗದಿರುವ ಆ ಮೋಕ್ಷ ಪದವಿಯನ್ನು ನಾನು ಇಚ್ಛಿಸುವದಿಲ್ಲ. ನಿನ್ನ ಕಥಾಮೃತ ಶ್ರವಣವನ್ನು ಬಿಟ್ಟು ಬೇರಾವ ವರವೂ ನನಗೆ ಬೇಡ.

ಹೀಗೆ ಪೃಥುರಾಜನು ಭಗವಂತನನ್ನು ಕುರಿತು ಪ್ರಾರ್ಥಿಸಿದಾಗ ಭಗವಂತನು ರಾಜನನ್ನು ಕುರಿತು ಹೇಳುತ್ತಾನೆ – ರಾಜನೇ! ನಿನಗೆ ನನ್ನಲ್ಲಿ ಭಕ್ತಿ ಉಂಟಾಗಲಿ, ನಿನ್ನ ಚಿತ್ತವು ನನ್ನಲ್ಲಿಯೇ



ಲೀನವಾಗಿರುವುದು ಅದೃಷ್ಟ ವಿಶೇಷವೇ ಆಗಿದೆ. ನೀನು ಜಾಗರೂಕವಾಗಿದ್ದು – ನನ್ನ ಆಜ್ಞೆಯನ್ನು ಪಾಲಿಸುತ್ತಿರು– ನನ್ನ ಆಜ್ಞೆಯನ್ನು ಪಾಲಿಸುವ ನಿನಗೆ ಮಂಗಳವೇ ಉಂಟಾಗುತ್ತದೆ.

ಪೃಥು ಚಕ್ರವರ್ತಿಯ ಭಕ್ತಿಗೆ ಮೆಚ್ಚಿ ಆ ಭಗವಂತನು ಪ್ರತ್ಯಕ್ಷನಾಗಿ ಒಲಿದು ಬಂದು ಮೇಲೆ ತಿಳಿಸಿದಂತೆ ವರಗಳನ್ನು ನೀಡಿ ಅನುಗ್ರಹಿಸಿದ. ಇಂಥ ನಾರಾಯಣನೇ ನಿನಗೆ ನಮಸ್ಕಾರವು ಎಂದು ಶ್ರೀ ದಾಸರು ಇಲ್ಲಿ ಹೇಳುತ್ತಿದ್ದಾರೆ.

**ಶೂಲಿಯನು ಬೆಂಬತ್ತಿ ಸುಡುವೆನೆಂಬನ ಸುಟ್ಟೆ**
**ನಾರಾಯಣಾಯ ನಮೋ ನಾರಾಯಣ ।**
**ಶೀಲ ವಿಡಿದಂಬರೀಷನ ಮತವ ಗೆಲಿಸಿದೆಯೋ**
**ನಾರಾಯಣಾಯ ನಮೋ ನಾರಾಯಣ ॥3॥**

ಹಿಂದೆ ರುದ್ರದೇವರು ಶಕುನಿಯ ಮಗನಾದ ವೃಕಾಸುರನಿಗೆ "ತಾನು ಯಾರ ತಲೆಯ ಮೇಲೆ ಕೈಯಿಡುವನೋ ಅವರು ಸುಟ್ಟು ಸಾಯಬೇಕು" ಎಂಬ ವರವನ್ನು ಕೊಟ್ಟರು. ಈ ವರವನ್ನು ಪರೀಕ್ಷಿಸಲು ಅವನು ರುದ್ರದೇವರ ತಲೆಯ ಮೇಲೆ ಕೈಯಿಡಲು ಹೊರಟಾಗ ರುದ್ರದೇವರು ಓಡತೊಡಗಿದರು. ವೃಕಾಸುರನು ಅವರ ಬೆನ್ನತ್ತಿ ಓಡಿದನು. ರುದ್ರದೇವರು ಭೀತಿಯಿಂದ ಎಲ್ಲ ಲೋಕಗಳಿಗೆ ಓಡಿಹೋಗಿ ರಕ್ಷಣೆ ಸಿಗದೇ ಕೊನೆಗೆ ವೈಕುಂಠಕ್ಕೆ ಬಂದರು. ಇದನ್ನು ನೋಡಿದ ನಾರಾಯಣನು ವಟುರೂಪವನ್ನು ಧರಿಸಿ ಅವನನ್ನು ಮೋಹಗೊಳಿಸಿ ಅವನ ಕೈಯನ್ನು ತನ್ನ ತಲೆಯ ಮೇಲೆ ಇಡುವಂತೆ ಮಾಡಿ ಅವನೇ ಸುಟ್ಟು ಸಾಯುವಂತೆ ಮಾಡಿ ರಕ್ಷಿಸಿದನು. ಇಂಥ ನಾರಾಯಣನಿಗೆ ನಮಸ್ಕಾರವು.

ತಿಥಿತ್ರಯಗಳನ್ನು ಪಾಲಿಸುವುದರಲ್ಲಿ ಸದ್‌ವ್ರತಸ್ಥನಾದ ಅಂಬರೀಷರಾಜನು ಸಾಧನ ದ್ವಾದಶಿಯ ದಿನ ಪಾರಣೆಯನ್ನು ಮಾಡಲು ಉದ್ಯುಕ್ತನಾದಾಗ ಪೂಜ್ಯರಾದ ದುರ್ವಾಸ ಮಹರ್ಷಿಗಳು ಅಲ್ಲಿ ಪ್ರತ್ಯಕ್ಷರಾದರು. ಅಂಬರೀಷರಾಜನು ಅತಿಥಿಗಳಾದ ದುರ್ವಾಸರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಪೂಜಿಸಿ ಭೋಜನ ಸ್ವೀಕರಿಸಲು ಪ್ರಾರ್ಥಿಸಿದನು. ದುರ್ವಾಸರು ಸ್ನಾನಮಾಡಿ ಬರುವೆವೆಂದು ಹೇಳಿ ನದಿಗೆ ಹೋದವರು ಪಾರಣೆಯ ಸಮಯ ಸಮೀಪಿಸಿದರೂ ಬರಲಿಲ್ಲ. ಆಗ ರಾಜನು ಬ್ರಾಹ್ಮಣರನ್ನು ಕೇಳಿ ತೀರ್ಥಪಾನ ಮಾಡಿ ನೀರು ಕುಡಿದು ಭಗವಂತನ ಧ್ಯಾನ ಮಾಡುತ್ತ ದುರ್ವಾಸರ ಆಗಮನದ ನಿರೀಕ್ಷೆಯಲ್ಲಿದ್ದ. ಸ್ವಲ್ಪ ಹೊತ್ತಿನಲ್ಲಿ ದುರ್ವಾಸರು ಬಂದು ನಡೆದ ವಿಷಯವನ್ನು ತಮ್ಮ ಜ್ಞಾನ ದೃಷ್ಟಿಯಿಂದ ತಿಳಿದು ತಮ್ಮ ಒಂದು ಜಟೆಯನ್ನು ಕಿತ್ತಿ ಆಭಿಚಾರಿಕ ದೇವತೆಯನ್ನು ಸೃಷ್ಟಿಸಿದರು. ಅದು ಅಂಬರೀಷ ರಾಜನ ಬೆನ್ನು ಹತ್ತಿದಾಗ ಭಗವಂತನಿಂದ ರಾಜನಿಗೆ ಕೊಡಲ್ಪಟ್ಟ ಚಕ್ರಾಯುಧವು ಆಭಿಚಾರಿಕ ದೇವತೆಯನ್ನು ದಹನಮಾಡಿ ದುರ್ವಾಸರ ಬೆನ್ನು ಹತ್ತಿತು. ಅವರು ಎಲ್ಲಿ ಹೋದರೂ ರಕ್ಷಣೆ ಸಿಗಲಿಲ್ಲ. ಶ್ರೀನಾರಾಯಣನ ಹತ್ತಿರ ಬಂದಾಗ ಅವನು "ನಾನು ಭಕ್ತಪರಾಧೀನ, ನೀವು ರಾಜನನ್ನೇ ಶರಣು ಹೊಂದಿರಿ" ಎಂದು ಹೇಳಿ ಕಳಿಸಿದನು. ಹಾಗಾಗಿ ಸದ್‌ವ್ರತಸ್ಥನಾದ ಅಂಬರೀಷನ ಮತವನ್ನೇ ಗೆಲಿಸಿದೆ – ನಾರಾಯಣನೇ ನಿನಗೆ ನಮಸ್ಕಾರ ಎಂದು ಶ್ರೀ ದಾಸರು ಇಲ್ಲಿ ಹೇಳುತ್ತಿದ್ದಾರೆ.



**ಶೂಲಿಯನು ಬೆಂಬತ್ತಿ ಸುಡುವೆನೆಂಬನ ಸುಟ್ಟೆ –**

ಈ ಪ್ರಸಂಗವು ಶ್ರೀಮದ್ ಭಾಗವತ ದಶಮಸ್ಕಂಧದಲ್ಲಿ ಉಕ್ತವಾಗಿದೆ [11]

**ವೃಕಾಸುರಾಯ ಗಿರಿಶೋ ವರಂ ದತ್ವಾಽಽಪ ಸಂಕಟಮ್ ।**
**ಯಸ್ಯ ಯಸ್ಯಕರಂ ಶೀರ್ಷ್ಣಿ ಧಾಸ್ಯೇ ಸ ಮ್ರಿಯತಾಮಿತಿ ॥**

**ಓಂಮಿತಿ ಪ್ರಹಸಂಸ್ತಸ್ಮೈ ದದೇಽಹೇರಮೃತಂ ಯಥಾ।**
**ಇತ್ಯುಕ್ತಃ ಸೋಽಸುರೋ ನೂನಂ ಗೌರೀಹರಣಲಾಲಸಃ ॥**

**ಸ ತದ್ವರ ಪರೀಕ್ಷಾರ್ಥಂ ಶಂಭೋರ್ಮೂರ್ಧ್ನಿಕಿಲಾಸುರಃ ।**
**ಸ್ವಹಸ್ತಂ ಧಾತುಮಾರೇಭೇ ಸೋಽಬಿಭ್ಯತಃ ಸ್ವಕೃತಾಚ್ಛಿವಃ ॥**

**ಅಜಾನಂತಃ ಪ್ರತಿವಿಧಿಂ ತೂಷ್ಣೀಮಾಸನ್ ಸುರೇಶ್ವರಾಃ ।**
**ತತೋ ವೈಕುಂಠಮಗಮದ್ ಭಾಸ್ವರಂ ತಮಸಃ ಪರಂ ॥**

.........................................................................

.........................................................................

**ಯದಿವಸ್ತತ್ರ ವಿಶ್ರಂಭೋ ದಾನವೇಂದ್ರ ಜಗದ್ಗುರೌ।**
**ತರ್ಹ್ಯಂಗಾಶು ಸ್ವಶಿರಸಿ ಹಸ್ತಂ ನ್ಯಸ್ತ ಪ್ರತೀಯತಾಮ್ ॥**
**ಯದ್ಯಸತ್ಯಂ ವಚಃ ಶಂಭೋ ಕಥಂಚಿತ್ ದಾನವರ್ಷಭ ।**
**ತದೈನಂ ಜಹ್ಯಸದ್ವಾಚಂ ನಯದ್ ವಕ್ತಾನೃತಂ ಪುನಃ ॥**
**ಇತ್ಥಂ ಭಗವತಶ್ಚಿತ್ರೈರ್ವಚೋಭಿಃ ಸ ಸುಪೇಶಲೈಃ ।**
**ಭಿನ್ನಧೀರ್ವಿಸ್ಮೃತಃ ಶೀರ್ಷ್ಣಿಸ್ವಹಸ್ತಂ ಕುಮತಿರ್ವ್ಯಧಾತ್ ॥**
**ಅಥಾಪತದ್ ಭಿನ್ನಶಿರಾ ವಜ್ರಾಹತ ಇವ ಕ್ಷಣಾತ್ ।**
**ಜಯಶ್ಯಬ್ದೋ ನಮಃಶಬ್ದಃ ಸಾಧು ಶಬ್ದೋಽಭವದ್ ದಿವಿ ।**
**ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ॥**

ಶಕುನಿಯ ಮಗನಾದ ವೃಕಾಸುರನು ನಾರದರಿಂದ, ಶಿವನು ಬೇಗ ವರಕೊಡುವನೆಂದು – ತಿಳಿದು ಕೇದಾರಕ್ಕೆ ಹೋಗಿ ತನ್ನ ದೇಹದ ಮಾಂಸವನ್ನು ಅಗ್ನಿಯಲ್ಲಿ ಹೋಮಿಸಿದನು. ಶಿವನು ಬರಲಿಲ್ಲ. ನಂತರ ಅವನು ತನ್ನ ಕೊರಳನ್ನು ಕತ್ತರಿಸಲು ಸಿದ್ಧನಾದಾಗ ಶಿವನು ಪ್ರತ್ಯಕ್ಷನಾಗಿ" ವರಬೇಡು" ಎಂದನು. ವೃಕಾಸುರನು "ನಾನು ಯಾರ ಯಾರ ತಲೆಯ ಮೇಲೆ ನನ್ನ ಹಸ್ತವನ್ನಿಡುವೆನೋ ಅವರು ಕೂಡಲೇ ಸುಟ್ಟು ಸಾಯಬೇಕು" ಎಂದು ವರಕೇಳಿ ಕೊಂಡನು. ಶಿವನು "ಹಾಗೇ ಆಗಲಿ" ಎಂದನು. ಶಿವನು ಕೊಟ್ಟ ಈ ವರವನ್ನು ಪರೀಕ್ಷಿಸಲು ಅಸುರನು ಶಿವನ ತಲೆಯ ಮೇಲೆ ಕೈಯಿಡಲು ಬಂದನು. ಶಿವನು ಭೀತನಾಗಿ ಎಲ್ಲ ಲೋಕಗಳಿಗೂ ಓಡಿ ಹೋಗಿ ರಕ್ಷಣೆ ದೊರೆಯದೇ ಕೊನೆಗೆ ವೈಕುಂಠಕ್ಕೆ ಬಂದನು. ಇದನ್ನು

11. ಶ್ರೀಮದ್ ಭಾಗವತ (10–88–21 ರಿಂದ 26)



ನೋಡಿದ ಶ್ರೀನಾರಾಯಣನು ವಟುರೂಪಿಯಾಗಿ ಬಂದು "ವೃಕಾಸುರನೇ! ಶಿವನ ಮಾತನ್ನು ನಾನು ಎಂದಿಗೂ ನಂಬುವದಿಲ್ಲ. ಅವನ ಮಾತನ್ನು ನೀನು ನಂಬುವೆಯಾದರೆ ನಿನ್ನ ತಲೆಯ ಮೇಲೆ ನಿನ್ನ ಕೈಯಿಟ್ಟು ನೋಡಿಕೋ. ಅವನ ಮಾತು ಸತ್ಯವೋ ಅಸತ್ಯವೋ ಎಂಬುದು ನಿಶ್ಚಯವಾಗುತ್ತದೆ" ಎಂದನು. ಭಗವಂತನಾದ ನಾರಾಯಣನ ಮಾತಿನಿಂದ ಮೋಹಿತನಾದ ವೃಕಾಸುರನು ತನ್ನ ತಲೆಯ ಮೇಲೆ ಕೈಯಿಟ್ಟುಕೊಂಡನು. ಕೂಡಲೇ ಅವನು ಸುಟ್ಟು ಸತ್ತು ಹೋದನು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು. ಹೀಗೆ ಶಿವನನ್ನು ಸಂಕಟದಿಂದ ಪಾರು ಮಾಡಿದ ಆ ನಾರಾಯಣನಿಗೆ ನಮಸ್ಕಾರವು.

**ಶೀಲವಿಡಿದಂಬರೀಷನ ಮತವ ಗೆಲಿಸಿದೆಯೋ।**

ಅಂಬರೀಷಮಹಾರಾಜನ ವೃತ್ತಾಂತವು ಶ್ರೀಮದ್ ಭಾಗವತ ನವಮಸ್ಕಂಧದಲ್ಲಿ ಉಕ್ತವಾಗಿದೆ.

ತಿಥಿತ್ರಯಗಳನ್ನು ಪಾಲಿಸುವುದರಲ್ಲಿ ಸದ್ ವ್ರತಸ್ಥನಾದ ಅಂಬರೀಷ ಮಹಾರಾಜನು ಒಂದು ಸಾಧನ ದ್ವಾದಶೀ ದಿನ ಪಾರಣೆ ಮಾಡಲು ಉದ್ಯುಕ್ತನಾದಾಗ. ಆ ವೇಳೆಗೆ ಸರಿಯಾಗಿ ಪೂಜ್ಯರಾದ ದುರ್ವಾಸ ಮುನಿಗಳು ಅಲ್ಲಿ ಪ್ರತ್ಯಕ್ಷರಾದರು. ಅಂಬರೀಷರಾಜನು ಅತಿಥಿಗಳಾದ ದುರ್ವಾಸರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಭೋಜನ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ದುರ್ವಾಸರು ಸ್ನಾನಮಾಡಿ ಆಹ್ನೀಕ ಮುಗಿಸಿಕೊಂಡು ಬರುವೆವೆಂದು ಹೇಳಿ ನದಿಗೆ ಹೋದವರು ಪಾರಣೆಯ ಸಮಯ ಸಮೀಪಿಸಿದರೂ ಬರಲೇ ಇಲ್ಲ. ಆಗ ರಾಜನು ಬ್ರಾಹ್ಮಣರನ್ನು ಪಾರಣೆಯ ಕುರಿತಂತೆ ವಿಚಾರಿಸಿದನು. ಅವರು ತೀರ್ಥ ಸ್ವೀಕರಿಸಿ ಜಲಪಾನ ಮಾಡಲು ತಿಳಿಸಲು ರಾಜನು ಹಾಗೆಯೇ ಮಾಡಿದನು. ವೇದಗಳು ಮತ್ತು ಸ್ಮೃತಿಗಳು ನೀರಿನ ಪಾರಣೆಯು ಹಿಂದಿನ ವ್ರತಕ್ಕೆ ಪಾರಣೆ ಮಾಡಿದಂತೆಯೂ, ಭೋಜನ ಮಾಡದಿದ್ದಂತೆಯೂ ಆಗುತ್ತದೆಂದು ಹೇಳುತ್ತವೆ.[12]

ಅಂಬರೀಷರಾಜನು ಭಗವಂತನ ಧ್ಯಾನ ಮಾಡುತ್ತ ದುರ್ವಾಸರ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಸ್ವಲ್ಪ ಹೊತ್ತಿನಲ್ಲಿ ದುರ್ವಾಸರು ಬಂದು ನಡೆದ ವಿಷಯವನ್ನು ತಮ್ಮ ಜ್ಞಾನದೃಷ್ಟಿಯಿಂದ ತಿಳಿದು ತಮ್ಮ ಜಟೆಯನ್ನು ಕಿತ್ತಿ ಆಭಿಚಾರಿಕ ದೇವತೆಯನ್ನು ನಿರ್ಮಿಸಿದರು. ಅದು ಅಂಬರೀಷ ರಾಜನ ಬೆನ್ನು ಹತ್ತಲು, ಭಗವಂತನಿಂದ ರಾಜನಿಗೆ ಕೊಡಲ್ಪಟ್ಟ ಚಕ್ರಾಯುಧವು ದುರ್ವಾಸರನ್ನು ಬೆನ್ನು ಹತ್ತಲು ಮುನಿಗಳು ಪ್ರಾಣರಕ್ಷಣೆಗಾಗಿ ದಿಕ್ಕೆಟ್ಟು ಓಡಿದರು.

ದುರ್ವಾಸರು ಸ್ವರ್ಗಲೋಕ, ಬ್ರಹ್ಮಲೋಕಗಳಿಗೆ ಹೋಗಿ ಕೊನೆಗೆ ಕೈಲಾಸಕ್ಕೆ ಹೋದರು. ಅವರೆಲ್ಲರೂ ಈ ಚಕ್ರದಿಂದ ನಾವು ನಿಮ್ಮನ್ನು ರಕ್ಷಿಸಲು ಸಾಧ್ಯವಿಲ್ಲವೆಂದು ಹೇಳಲು ದುರ್ವಾಸರು ಭಗವಂತನ ಹತ್ತಿರ ಬಂದರು. ಭಗವಂತನು "ದುರ್ವಾಸರೇ! ನಾನು ಭಕ್ತ ಪರಾಧೀನನಾಗಿದ್ದೇನೆ. ಅಸ್ವತಂತ್ರನಾಗಿದ್ದೇನೆ. ಸಜ್ಜನರಾದ ಭಕ್ತರಿಂದ ನನ್ನ ಮನಸ್ಸು ವಶೀಕೃತವಾಗಿದೆ. ನಾನು

12. ಅಂಭಸಾ ಕೇವಲೇನಾದ್ಯ ಕರಿಷ್ಯೇ ವ್ರತಪಾರಣಂ।
ಆಹುರಬ್ಭಕ್ಷಣಂ ವಿಪ್ರಾಹ್ಯಶಿತಂ ನಾಶಿತಂ ಚ ಯತ್ ॥ (9–6–28)
1) ಆಪೋಽಶ್ನಾತಿ ವೈ ತನ್ನೈವಾಶಿತಂ – ಶ್ರುತಿ
2) ಆಶಿತಾನಶಿತಾ ಆಪಃ – ಸ್ಮೃತಿ



ಭಕ್ತಜನ ಪ್ರಿಯನಾಗಿದ್ದೇನೆ. ಯಾವ ಭಕ್ತರು ತಮ್ಮ ಹೆಂಡತಿ, ಮಕ್ಕಳು, ಸಂಪತ್ತು, ಸ್ವರ್ಗಾದಿಗಳನ್ನು ಕೂಡ ತ್ಯಾಗ ಮಾಡಿ ನನ್ನನ್ನು ಮೊರೆ ಹೊಕ್ಕಿರುವರೋ, ಅಂಥ ಭಕ್ತರನ್ನು ನಾನು ಹೇಗೆ ಬಿಡಲು ಸಾಧ್ಯ? ಕಾರಣ ದುರ್ವಾಸರೇ, ನೀವು ಯಾರಿಗಾಗಿ ಅಭಿಚಾರಿಕ ಕೃತ್ಯವನ್ನು ಸೃಷ್ಟಿಮಾಡಿರುವಿರೋ ಅವರನ್ನೇ ಶರಣು ಹೊಂದಿರಿ" ಎಂದು ಹೇಳಿದನು.

ದುರ್ವಾಸರು ಅಲ್ಲಿಂದ ಹೊರಟು ಅಂಬರೀಷ ಮಹಾರಾಜನ ಹತ್ತಿರ ಕೂಡಲೇ ಹೊರಟು ಬಂದು ಅವನ ಪಾದಗಳನ್ನು ಹಿಡಿದುಕೊಂಡರು. ಆಗ ಅಂಬರೀಷ ಮಹಾರಾಜನು ದಯಾಗುಣದಿಂದ ಕೂಡಿದವನಾಗಿ ಭಗವಂತನ ಚಕ್ರಾಯುಧವನ್ನು ಸ್ತೋತ್ರ ಮಾಡಿದನು. ಮತ್ತು ನಮ್ಮ ಕುಲಕ್ಕೆ ಬ್ರಾಹ್ಮಣರು ದೈವವಾಗಿ ಇದ್ದರೆ ಈ ಬ್ರಾಹ್ಮಣರು ಕೂಡಲೇ ಸಂತಾಪರಹಿತರಾಗಲಿ ಎಂದು ಪ್ರಾರ್ಥಿಸಿದನು.

ಈ ರೀತಿಯಾದ ಅಂಬರೀಷರಾಜನ ಸ್ತುತಿಯಿಂದ ಶ್ರೀವಿಷ್ಣುಚಕ್ರವು ಶಾಂತ ಸ್ವರೂಪವುಳ್ಳದ್ದಾಯಿತು. ದುರ್ವಾಸರು ಅಸ್ತ್ರಾಗ್ನಿಯ ತೇಜಸ್ಸಿನಿಂದ ಮುಕ್ತರಾಗಿ ಕ್ಷೇಮವುಳ್ಳವರಾಗಿ ರಾಜನನ್ನು ಸಫಲವಾದ ಆಶೀರ್ವಾದಗಳನ್ನು ಮಾಡಿ ಹೊಗಳಿದರು.

ಅಂಬರೀಷರಾಜನು. ದುರ್ವಾಸರಿಗೆ ಸುಖಭೋಜನವನ್ನು ಮಾಡಿಸಿ ತಾನೂ ಭುಕ್ತಶೇಷವನ್ನು ಭೋಜನ ಮಾಡಿದನು.

ಹೀಗೆ ಆ ಭಗವಂತನು ಅಂಬರೀಷರಾಜನ ಮತವನ್ನೇ ಗೆಲಿಸಿ ಅವರನ್ನು ರಕ್ಷಿಸಿದನು. ಅಂಥ ನಾರಾಯಣನಿಗೆ ನಮಸ್ಕಾರವು.

**ಮಕರರೂಪದಿ ಸತ್ಯವ್ರತಗೆ ತತ್ವವನೊರೆದೆ**
**ನಾರಾಯಣಾಯ ನಮೋ ನಾರಾಯಣ ।**
**ಮುಖದಿ ಶ್ರುತಿ ಪಿಡಿತಂದು ವಾರಿಜಾಸನಗಿತ್ತೆ**
**ನಾರಾಯಣಾಯ ನಮೋ ನಾರಾಯಣ ॥ 4 ॥**

ಆ ನಾರಾಯಣರೂಪೀ ಭಗವಂತನು ಮತ್ಸ್ಯಾವತಾರವನ್ನು ತಾಳಿ ಸತ್ಯವ್ರತರಾಜರಿಗೆ ತತ್ವೋಪದೇಶವನ್ನು ಮಾಡಿದನು. ಮತ್ಸ್ಯರೂಪೀ ಭಗವಂತನು ವೇದಗಳನ್ನು ಅಪಹರಿಸಿದ ಸಜ್ಜನ ಶತ್ರುವಾದ ಹಯಗ್ರೀವನೆಂಬ ದೈತ್ಯನನ್ನು ಸಂಹರಿಸಿ, ನಾಲ್ಕು ವೇದಗಳನ್ನು ಚತುರ್ಮುಖ ಬ್ರಹ್ಮದೇವರಿಗೆ ನೀಡಿದನು. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ಮಕರರೂಪದಿ ಸತ್ಯವ್ರತಗೆ ತತ್ವವ ನೊರೆದೆ :**

ಹಿಂದೊಮ್ಮೆ ಸತ್ಯವ್ರತರಾಜರು ಕೃತಮಾಲಾನದಿಯಲ್ಲಿ ಅರ್ಘ್ಯವನ್ನು ಕೊಡುತ್ತಿರುವಾಗ ಅವರ ಬೊಗಸೆಯಲ್ಲಿ ಲೋಕವಿಲಕ್ಷಣವಾದ ಮೀನೊಂದು ಕಾಣಿಸಿತು. ಅದನ್ನು ಬೊಗಸೆಯಲ್ಲಿದ್ದ ನೀರಿನೊಂದಿಗೆ ನದಿಯಲ್ಲಿ ಎಸೆಯಲು, ಅದು ದಯಾವಂತರಾದ ಸತ್ಯವ್ರತ ರಾಜರನ್ನು ಕುರಿತು "ದೀನವತ್ಸಲರಾದ ರಾಜರೇ! ನನ್ನ ಜ್ಞಾತಿಗಳಿಂದ ನಾನು ಭೀತನಾಗಿದ್ದೇನೆ. ಕಷ್ಟಕ್ಕೆ ಸಿಲುಕಿದ ನನ್ನನ್ನು ನೀರಲ್ಲಿ ಬಿಡಬೇಡಿರಿ. ಮೊರೆ ಹೊಕ್ಕವರನ್ನು ಕೈಬಿಡುವುದು ರಾಜಧರ್ಮವಲ್ಲ" ಎಂದು ಹೇಳಿತು.



ಸತ್ಯವ್ರತರಾಜರು ಮೀನಿನ ಮಾತನ್ನು ಕೇಳಿ ತನ್ನ ಕಮಂಡಲುವಿನಲ್ಲಿ ಇಟ್ಟುಕೊಂಡು ಆಶ್ರಮಕ್ಕೆ ಹೋದರು. ಒಂದೇ ರಾತ್ರಿಯಲ್ಲಿ ಅದು ಕಮಂಡಲುವಿನ ತುಂಬ ಬೆಳೆದು ರಾಜನನ್ನು ಕುರಿತು ರಾಜನೇ! "ನನಗೊಂದು ವಿಸ್ತಾರವಾದ ಸ್ಥಳ ಕಲ್ಪಿಸಿಕೊಡು" ಎಂದಿತು. ರಾಜರು ಅದನ್ನು ಬಾವಿಯಲ್ಲಿ ಹಾಕಿದರು. ಒಂದು ಮುಹೂರ್ತದಲ್ಲಿ ಮೂರು ಮಾರು ಬೆಳೆಯಿತು. ಬಾವಿಯು ಅದಕ್ಕೆ ಸಾಲದೆಂದು ಅದನ್ನು ಸರೋವರದಲ್ಲಿ ಬಿಟ್ಟರು. ಅದೂ ಸಾಲದಾಗಲು ಅದನ್ನು ಸಮುದ್ರಕ್ಕೆ ಸೇರಿಸಿದರು. ಆಗ ಆ ಮೀನು ರಾಜರನ್ನು ಕುರಿತು "ರಾಜರೇ! ಹೆಚ್ಚು ಬಲವುಳ್ಳ ಮೊಸಳೆಗಳು ನನ್ನನ್ನು ತಿನ್ನುತ್ತವೆಯಾದ್ದರಿಂದ ಈ ಸಮುದ್ರದಲ್ಲಿ ಬಿಡುವದು ತರವಲ್ಲ" ಎಂದಿತು.

ಈ ರೀತಿಯಾಗಿ ಮನೋಹರವಾದ ಮಾತುಗಳನ್ನು ಹೇಳುವ ಆ ಮೀನನ್ನು ಕುರಿತು ರಾಜರು "ನನ್ನನ್ನು ಮೋಹಗೊಳಿಸುತ್ತಿರುವ ನೀನು ಯಾರು? ನೀನು ವಿಲಕ್ಷಣವಾದ ಮೀನಾಗಿರುವೆ" ಎಂದರು.

ಹೀಗೆ ವಿಲಕ್ಷಣ ಸಾಮರ್ಥ್ಯವನ್ನು ಕಂಡ ಸತ್ಯವ್ರತರಾಜರು ಶ್ರೀಹರಿಯ ಅನುಗ್ರಹದಿಂದ ಆ ಮೀನು ಮತ್ಸ್ಯರೂಪಿಯಾದ ಭಗವಂತನೇ ಎಂದು ತಿಳಿದು ಸ್ತೋತ್ರ ಮಾಡಿದರು.

ಸ್ತೋತ್ರದಿಂದ ಸಂತುಷ್ಟನಾದ ಮತ್ಸ್ಯರೂಪೀ ಭಗವಂತನು ಸತ್ಯವ್ರತರಾಜರನ್ನು ಕುರಿತು ಇಂದಿನಿಂದ ಏಳು ದಿನಗಳಲ್ಲಿ ಮೂರು ಲೋಕಗಳು ಪ್ರಳಯ ಸಮುದ್ರದಲ್ಲಿ ಮುಳುಗಿ ಹೋಗುತ್ತವೆ. ಆಗ ನಿನಗಾಗಿ ಒಂದು ವಿಶಾಲವಾದ ದೋಣಿಯನ್ನು ಕಳಿಸುತ್ತೇನೆ. ಅದರಲ್ಲಿ ನೀನು ಕುಳಿತು ಯಾವ ಆತಂಕವಿಲ್ಲದೇ ಸಂಚರಿಸು. ಬಿರುಗಾಳಿಯಿಂದ ಹೊಯ್ದಾಡುವ ನಿನ್ನ ಡೋಣಿಯ ಸಮೀಪಕ್ಕೆ ನನ್ನ ಕೋಡು ಬರುತ್ತದೆ. ಆಗ ಅಲ್ಲಿಯೇ ಸುಳಿದಾಡುತ್ತಿರುವ ಹಗ್ಗದಂತಿರುವ ಹಾವಿನಿಂದ ನಿನ್ನ ಡೋಣಿಯನ್ನು ನನ್ನ ಕೋಡಿಗೆ ಬಂಧಿಸು." ಎಂದು ಹೇಳಿ ಅದೃಶ್ಯನಾದನು. ಸತ್ಯವ್ರತರಾಜರು ಪ್ರಳಯಕಾಲವನ್ನು ನಿರೀಕ್ಷಿಸುತ್ತ ಕುಳಿತರು. ಏಳು ದಿನಗಳ ನಂತರ ಪ್ರಳಯಕಾಲದ ಮೋಡಗಳಿಂದ ಉಕ್ಕೇರುತ್ತಿದ್ದ ಸಮುದ್ರವು ಎಲ್ಲೆ ಮೀರಿ ಸುತ್ತಲೂ ಆವರಿಸುತ್ತ ಮೂರು ಲೋಕಗಳು ಮುಳುಗುವಂತೆ ಕಂಡಿತು. ಸತ್ಯವ್ರತರಾಜರು ಈ ಪ್ರಳಯೋದಕದಲ್ಲಿ ತೇಲಿ ಬರುತ್ತಿರುವ ನಾವೆಯನ್ನು ಕಂಡರು. ಶ್ರೀಹರಿಯ ಅಪ್ಪಣೆಯಂತೆ ಪೈರು, ಬಳ್ಳಿ ಇತ್ಯಾದಿಗಳನ್ನು ತೆಗೆದುಕೊಂಡು ಸಪ್ತರ್ಷಿಗಳ ಜೊತೆ ನಾವೆಯನ್ನು ಹತ್ತಿದರು. ಸಪ್ತರ್ಷಿಗಳು "ರಾಜನೇ! ಶ್ರೀಹರಿಯನ್ನು ಧ್ಯಾನಿಸು, ಅವನು ನಮ್ಮನ್ನು ಕಷ್ಟಗಳಿಂದ ರಕ್ಷಿಸುತ್ತಾನೆ" ಎಂದು ಹೇಳಿದರು. ಸತ್ಯವ್ರತರಾಜರು ಭಕ್ತಿಯಿಂದ ಧ್ಯಾನ ಮಾಡಲು ಶ್ರೀಹರಿಯು ಬಂಗಾರದ ಕೋಡುಳ್ಳ ಒಂದು ಯೋಜನ ವಿಸ್ತಾರವಾದ ಮತ್ಸ್ಯರೂಪದಿಂದ ವ್ಯಕ್ತನಾದನು. ರಾಜರು ನಾವೆಯನ್ನು ಅದರ ಕೋಡಿಗೆ ಹಗ್ಗದಂತಿರುವ ಹಾವಿನಿಂದ ಕಟ್ಟಿ ಹಾಕಿದರು. ಮತ್ಸ್ಯರೂಪೀ ಭಗವಂತನು ಸತ್ಯವ್ರತರಾಜರಿಗೆ ಜ್ಞಾನ, ಭಕ್ತಿ ನಿಷ್ಕಾಮಕರ್ಮಗಳೆಂಬ ಮೋಕ್ಷೋಪಾಯವನ್ನು, ತತ್ತ್ವಗಳನ್ನು ಉಪದೇಶ ಮಾಡಿದನು[13] ಇಂಥ ನಾರಾಯಣನಿಗೆ ನಮಸ್ಕಾರವು.

---

13. ಶ್ರೀಮದ್ ಭಾಗವತ – ಅಷ್ಟಮಸ್ಕಂಧ – 24ನೆಯ ಅಧ್ಯಾಯ

**ಮುಖದಿ ಶ್ರುತಿ ಪಿಡಿತಂದು ವಾರಿಜಾಸನಗಿತ್ತೆ –**

ಬ್ರಹ್ಮದೇವರ ಮುಖದಿಂದ ಹೊರಹೊಮ್ಮಿದ ವೇದಗಳನ್ನು ಹಯಗ್ರೀವನೆಂಬ ಅಸುರನು ಅಪಹರಿಸಲು ಅವನನ್ನು ಮತ್ಸ್ಯರೂಪೀ ಭಗವಂತನು ಸಂಹಾರ ಮಾಡಿ ಆ ನಾಲ್ಕು ವೇದಗಳನ್ನು ಚತುರ್ಮುಖ ಬ್ರಹ್ಮದೇವರಿಗೆ ನೀಡಿದನು.[14] ಇಂಥ ನಾರಾಯಣನಿಗೆ ನಮಸ್ಕಾರವು.

**ಪುರುಹೂತಗಖಿಳ ಪರಮಾರ್ಥವನು ಅರುಹಿದೆ.**
**ನಾರಾಯಣಾಯ ನಮೋ ನಾರಾಯಣ ।**
**ಸುರಪನ್ನ ಭಯವಟ್ಟಿ ಧ್ರುವಗೆ ಧ್ರುವಪದವಿತ್ತೆ**
**ನಾರಾಯಣಾಯ ನಮೋ ನಾರಾಯಣ ॥5॥**

ದೇವೇಂದ್ರನು ಅರ್ಜುನನನಾಗಿ ಅವತರಿಸಿದಾಗ ಶ್ರೀಕೃಷ್ಣ ಪರಮಾತ್ಮನು ಪರಮಾರ್ಥ ವೆನಿಸಿದ ಶ್ರೀಮದ್ ಭಗವದ್ಗೀತೆಯನ್ನು ಉಪದೇಶಿಸಿದನು. ಅಂಥ ನಾರಾಯಣ ರೂಪೀ ಶ್ರೀಕೃಷ್ಣನಿಗೆ ನಮಸ್ಕಾರವು. ಬಲಿರಾಜನು ಇಂದ್ರಪುರಿಯಾದ ಅಮರಾವತಿಗೆ ಮುತ್ತಿಗೆ ಹಾಕಿ ಇಂದ್ರನಿಂದ ಸ್ವರ್ಗವನ್ನು ಕಸಿದುಕೊಂಡು ಇಂದ್ರನಿಗೆ ಭಯಪಡಿಸಿದನು. ಆಗ ಶ್ರೀನಾರಾಯಣನು ವಾಮನರೂಪವನ್ನು ತೆಗೆದುಕೊಂಡು ಬಲಿರಾಜನ ಯಜ್ಞವಾಟಕ್ಕೆ ಹೋಗಿ ಅವನಿಂದ ಮೂರು ಪಾದ ಭೂಮಿಯನ್ನು ದಾನವಾಗಿ ಪಡೆದು ತ್ರಿವಿಕ್ರಮನಾಗಿ ಬೆಳೆದು ಒಂದು ಪಾದದಿಂದ ಭೂಮಿಯನ್ನು ಆಕ್ರಮಿಸಿ, ಎರಡನೆಯ ಪಾದದಿಂದ ಸ್ವರ್ಗವನ್ನು ಆಕ್ರಮಿಸಿದನು. ಮೂರನೆಯ ಪಾದಕ್ಕೆ ಸ್ಥಳವೇ ಇಲ್ಲ ಎನ್ನಲು ಬಲಿರಾಜನು ಮೂರನೆಯ ಪಾದವನ್ನು ತನ್ನ ತಲೆಯ ಮೇಲಿಟ್ಟು ಅನುಗ್ರಹಿಸೆಂದನು. ಶ್ರೀವಾಮನ ದೇವರು ಹಾಗೆಯೇ ಮಾಡಿ ಇಂದ್ರದೇವರಿಗೆ ಸ್ವರ್ಗವನ್ನು ಕೊಟ್ಟು ಅವರ ಭಯವನ್ನು ಹೋಗಲಾಡಿಸಿದರು. ಮಲತಾಯಿ ಸುರುಚಿಯ ಮಾತಿನಿಂದನೊಂದ ಧ್ರುವರಾಜರು, ಸುನೀತಿಯ ಮಾತಿನಂತೆ ಕಾಡಿಗೆ ಹೋಗಿ ಶ್ರೀ ನಾರದರ ಉಪದೇಶದಂತೆ ಶ್ರೀನಾರಾಯಣನನ್ನು ಕುರಿತು ತಪಸ್ಸು ಮಾಡಿ ಪ್ರತ್ಯಕ್ಷೀಕರಿಸಿಕೊಂಡರು. ಶ್ರೀನಾರಾಯಣನ ಅದೇಶದಂತೆ 36000 ವರ್ಷಗಳವರೆಗೆ ರಾಜ್ಯ ಪರಿಪಾಲನೆ ಮಾಡಿದರು. ನಂತರ ಶ್ರೀನಾರಾಯಣ ದೇವರಿಂದ ಕೊಡಲ್ಪಟ್ಟ ಧ್ರುವಲೋಕದಲ್ಲಿ ವಾಸ ಮಾಡಿದರು. ಇಂಥ ನಾರಾಯಣನಿಗೆ ನಮಸ್ಕಾರವು.

**ಪುರುಹೂತಗಖಿಳ ಪರಮಾರ್ಥವನು ಅರುಹಿದೆ :**

ಹಿಂದೆ ಕುರುಕ್ಷೇತ್ರಯುದ್ಧದಲ್ಲಿ ಇಂದ್ರಾವತಾರಿಯಾದ ಅರ್ಜುನನು ಯುದ್ಧ ಮಾಡುವದಿಲ್ಲವೆಂದು ಶಸ್ತ್ರಗಳನ್ನು ಕೆಳಗಿಟ್ಟು ನಿಂತಾಗ ಶ್ರೀಕೃಷ್ಣಪರಮಾತ್ಮನು ಅವನಿಗೆ ಹದಿನೆಂಟು ಅಧ್ಯಾಯ ಗೀತೆಯನ್ನು ಉಪದೇಶಮಾಡಿ ಪರಮಾರ್ಥಸಾರವನ್ನೇ ತಿಳಿಸಿಕೊಟ್ಟನು.

ಗೀತೆಯ ಪ್ರತಿ ಅಧ್ಯಾಯದ ಕೊನೆಯಲ್ಲಿ ಹೇಳುವ –

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

---

14. ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯ – (3–40)



ಶ್ರೀಕೃಷ್ಣಾರ್ಜುನ ಸಂವಾದೇ – ಈ ಮಾತಿನಿಂದ ಸ್ಪಷ್ಟವಾಗುತ್ತದೆ. ಹಾಗೂ

**ಸರ್ವೋಪನಿಷದೋ ಗಾವಃ ದೋಗ್ಧಾಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**[15]

ಈ ಮಾತಿನಿಂದಲೂ ಸ್ಪಷ್ಟವಾಗುತ್ತದೆ. ಇಂಥ ಪರಮಾರ್ಥವೆನಿಸಿದ ಗೀತೆಯನ್ನು ಉಪದೇಶಿಸಿದ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು –

**ಸುರಪನ್ನ ಭಯವಟ್ಟಿ –**

ಪೂರ್ವದಲ್ಲಿ ಬಲಿರಾಜನು ಇಂದ್ರಪುರಿಯಾದ ಅಮರಾವತಿಗೆ ಮುತ್ತಿಗೆ ಹಾಕಿ ಇಂದ್ರನಿಂದ ಸ್ವರ್ಗವನ್ನು ವಶಪಡಿಸಿಕೊಂಡು ಅವನಿಗೆ ಭಯವನ್ನುಂಟುಮಾಡಿದನು ಆ ಕಾಲಕ್ಕೆ ಶ್ರೀ ನಾರಾಯಣದೇವರು ಅವತರಿಸಿ ವಾಮನರೂಪವನ್ನು ತೆಗೆದುಕೊಂಡು ಬಲಿರಾಜನ ಯಜ್ಞವಾಟಕ್ಕೆ ಬಂದು ಬಲಿರಾಜನಿಂದ ಮೂರುಪಾದ ಭೂಮಿಯನ್ನು ದಾನವಾಗಿ ಪಡೆದರು. ನಂತರ ತಾನು ತ್ರಿವಿಕ್ರಮನಾಗಿ ಬೆಳೆದು ಒಂದು ಪಾದದಿಂದ ಬಲಿಯ ಭೂಮಿಯನ್ನು ಆಕ್ರಮಿಸಿ, ದೇಹದಿಂದ ಅಂತರಿಕ್ಷವನ್ನು, ತೋಳುಗಳಿಂದ ದಿಕ್ಕನ್ನು ವ್ಯಾಪಿಸಿದರು. ಎರಡನೆಯ ಪಾದದಿಂದ ಸ್ವರ್ಗವನ್ನು ಆಕ್ರಮಿಸಿದರು. ಮೂರನೆಯ ಪಾದಕ್ಕೆ ಸ್ಥಳವಿಲ್ಲದಾಯಿತು.

ಆಗ ಬಲಿರಾಜನು ಮೂರನೆಯ ಪಾದವನ್ನು ತನ್ನ ತಲೆಯ ಮೇಲಿಟ್ಟು ಅನುಗ್ರಹಿಸು ಎನ್ನಲು ಶ್ರೀವಾಮನನು ಹಾಗೆಯೇ ಮಾಡಿ ಇಂದ್ರನಿಗೆ ಸ್ವರ್ಗಾಧಿಪತ್ಯವನ್ನು ಕೊಟ್ಟು ಅವನ ಭಯವನ್ನು ಹೋಗಲಾಡಿಸಿದನು.

ಈ ವಿಷಯವನ್ನು ಶ್ರೀಮದ್ ಭಾಗವತದಲ್ಲಿ ತಿಳಿಸಿದ್ದಾರೆ.[16]

**ಪ್ರಾಪ್ಯ ತ್ರಿಭುವನಂ ಚೇಂದ್ರ ಉಪೇಂದ್ರ ಭುಜಪಾಲಿತಮ್ ।**
**ಶ್ರಿಯಾ ಪರಮಯಾ ಜುಷ್ಟೋ ಮುಮುದೇ ಗತಸಾಧ್ವಸಃ ॥**

ಇಂದ್ರದೇವರು ಮೂರ್ಲೋಕದ (ಸ್ವರ್ಗದ) ಆಧಿಪತ್ಯವನ್ನು ಪಡೆದು ಶ್ರೀವಾಮನ ದೇವರ ಭುಜಬಲದ ರಕ್ಷಣೆಯಲ್ಲಿ ಭಯನಿರ್ಮುಕ್ತರಾಗಿ ಮಹಾಸಂಪತ್ತಿನಿಂದ ಕೂಡಿ ಆನಂದಿಸಿದರು.

**ಧ್ರುವಗೆ ಧ್ರುವಪದವಿಯನಿತ್ತೆ –**

ತಂದೆ ಉತ್ತಾನಪಾದರಾಜನ ತೊಡೆಯ ಮೇಲೆ ಕುಳ್ಳಿರಲು ಹೋದಾಗ ಮಲತಾಯಿ ಸುರುಚಿಯ ಮಾತುಗಳಿಂದ ನೊಂದ ಧ್ರುವರಾಜರು, ಸುನೀತಿಯ ಮಾತಿನಂತೆ ಆ ಭಗವಂತನನ್ನು ಕಾಣಲು ಅಡವಿಗೆ ನಡೆದರು. ದಾರಿಯಲ್ಲಿ ಶ್ರೀ ನಾರದರ ಭೆಟ್ಟಿಯಾಯಿತು. ಅವರು ಧ್ರುವರಾಜರಿಗೆ "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರ ಮಂತ್ರವನ್ನು ಉಪದೇಶಿಸಿದರು. ಅವರ ಉಪದೇಶದಂತೆ ಶ್ರೀನಾರಾಯಣನನ್ನು ಕುರಿತು ತಪಸ್ಸು ಮಾಡುತ್ತಿರಲು ಧ್ರುವರಾಜರ ಭಕ್ತಿಗೆ ಮೆಚ್ಚಿದ ಶ್ರೀನಾರಾಯಣನು ಪ್ರತ್ಯಕ್ಷನಾದನು.

15. ಗೀತಾ ಮಾಹಾತ್ಮ್ಯ – 6ನೆಯ ಶ್ಲೋಕ
16. ಶ್ರೀಮದ್ ಭಾಗವತ (8–22–25)



ಆಗ ಧ್ರುವರಾಜರು ಸ್ತೋತ್ರ ಮಾಡಲು ಇಚ್ಛಿಸಿದರು. ಆದರೆ ಅವರ ಬಾಯಿಂದ ಮಾತೇ ಹೊರಡಲಿಲ್ಲ. ಆಗ ನಾರಾಯಣನು ಅವರ ಕೆನ್ನೆಗೆ ಶಂಖದಿಂದ ಸ್ಪರ್ಶ ಮಾಡಿದಾಗ ಕೂಡಲೇ ಸ್ತೋತ್ರ ಹೊರಬಂದಿತು.[17]

**ಯೋಽಂತಃ ಪ್ರವಿಶ್ಯ ಮಮವಾಚಮಿಮಾಂ ಪ್ರಸುಪ್ತಾಂ**
**ಸಂಜೀವತ್ಯಖಿಲಶಕ್ತಿಧರಃ ಸ್ವಧಾಮ್ನಾ ।**
**ಅನ್ಯಾಂಶ್ಚಹಸ್ತ ಚರಣ ಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಂ ॥**

ಈ ಸ್ತೋತ್ರದಿಂದ ಸಂತುಷ್ಟನಾದ ನಾರಾಯಣನು ಧ್ರುವರಾಜರಿಗೆ 36000 ವರ್ಷ ರಾಜ್ಯಭಾರ ಮಾಡುವಂತೆ ಅನುಗ್ರಹಿಸಿ ಧ್ರುವಲೋಕವನ್ನು ಕೂಡ ಅನುಗ್ರಹಿಸಿದನು.[18]

**ತತೋ ಗಂತಾಸಿ ಮತ್ ಸ್ಥಾನಂ ಸರ್ವಲೋಕನಮಸ್ಕೃತಮ್ ।**
**ಉಪರಿಷ್ಟಾದ್ ಋಷಿಭ್ಯಸ್ತ್ವಂ ಯತೋ ನಾವರ್ತತೇ ಯತಿಃ ॥**

ಉಕ್ತಿಯಂತೆ ಧ್ರುವರಾಜರಿಗೆ ಸಪ್ತರ್ಷಿ ಮಂಡಲಕ್ಕೂ ಮೇಲಿರುವ ಧ್ರುವನಕ್ಷತ್ರ ಲೋಕದ ಆಧಿಪತ್ಯವನ್ನು ಭಗವಂತ ಅನುಗ್ರಹಿಸಿದ.

ಇಂಥ ನಾರಾಯಣರೂಪೀ ಭಗವಂತನೇ ನಿನಗೆ ನಮಸ್ಕಾರವು.

**ಮಹಾಪಾಪನಿರತ ಅಜಾಮಿಳನನಿಷ್ಟಕರಿಸಿದೆ**
**ನಾರಾಯಣಾಯ ನಮೋ ನಾರಾಯಣ ।**
**ಮಹಿದಾಸನಾಗಿ ತಾಯಿಗೆ ತತ್ವವನು ಪೇಳ್ದೆ**
**ನಾರಾಯಣಾಯ ನಮೋ ನಾರಾಯಣ ॥6॥**

ಮಹಾಪಾಪಕೃತ್ಯಗಳನ್ನು ಮಾಡುವುದರಲ್ಲಿ ನಿರತನಾದ ಅಜಾಮಿಳನ ಅನಿಷ್ಟವನ್ನು ದೂರಮಾಡಿದ ನಾರಾಯಣನೇ ನಿನಗೆ ನಮಸ್ಕಾರವು. ಆ ನಾರಾಯಣನು ಇತರಾದೇವಿಯಲ್ಲಿ ಮಹಿದಾಸನಾಗಿ ಅವತರಿಸಿ ತನ್ನ ತಾಯಿಗೆ ತತ್ತ್ವವನ್ನು ಉಪದೇಶ ಮಾಡಿದ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ಮಹಾಪಾಪನಿರತ ಅಜಾಮಿಳನನಿಷ್ಟ ಕರಿಸಿದೆ –**

ಅಜಾಮಿಳನು ಮಹಾಪಾಪಕೃತ್ಯಗಳನ್ನು ಮಾಡುತ್ತಿದ್ದ. ಅಂತ್ಯಕಾಲದಲ್ಲಿ ಅರ್ಥಾನುಸಂಧಾನ ಪೂರ್ವಕ ಭಗವಂತನ ನಾರಾಯಣನ ಸ್ಮರಣೆಯಿಂದ "ನಾರಾಯಣ" ವೆಂಬ ನಾಮವುಳ್ಳ ತನ್ನ ಮಗನನ್ನು ಕರೆದ. ಆಗ ವಿಷ್ಣುದೂತರು ಬಂದು ಇವನನ್ನು ಯಮಪಾಶಗಳಿಂದ ಮುಕ್ತನನ್ನಾಗಿ ಮಾಡಿದರು. ಪಾಪನಿಮಿತ್ತವಾಗಿ ಬಂದ ಅನಿಷ್ಟವನ್ನು ದೂರಮಾಡಿ ಅವನನ್ನು ಉದ್ಧರಿಸಿ ಸಾಧನ ಪೂರ್ತಿಯಲ್ಲಿ ಮೋಕ್ಷವನ್ನು ಆ ನಾರಾಯಣನು ದಯಪಾಲಿಸಿದನು.

---

17. ಶ್ರೀಮದ್ ಭಾಗವತ (4–9–6)
18. ಶ್ರೀಮದ್ ಭಾಗವತ – (4–9–25)

ಶ್ರೀಮದ್ ಭಾಗವತದಲ್ಲಿ ಈ ವಿಷಯವನ್ನು ನಿರೂಪಿಸಿದ್ದಾರೆ.[19]

**ಏತಾವತಾಽಲಮಘನಿರ್ಹರಣಾಯ ಪುಂಸಾಂ**
**ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ ।**
**ವಿಕ್ರುಶ್ಯ ಪುತ್ರ ಮಘವಾನ್ ಯದಜಾಮಿಳೋಽಪಿ**
**ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಮ್ ॥**

ಭಗವಂತನ ಗುಣ, ಲೀಲೆ ಮತ್ತು ನಾಮಗಳ ಚೆನ್ನಾದ ಕೀರ್ತನೆಯು ಮನುಷ್ಯರ ಪಾಪಗಳನ್ನು ಪೂರ್ಣವಾಗಿ ನಾಶಮಾಡುತ್ತದೆ. ಇದೇನೂ ಅದರ ದೊಡ್ಡ ಫಲವಲ್ಲ. ಏಕೆಂದರೆ ಅತ್ಯಂತ ಪಾಪಿಯಾದ ಅಜಾಮಿಳನು ಮರಣಕಾಲದಲ್ಲಿ ತನ್ನ ಮಗ "ನಾರಾಯಣ"ನ ಹೆಸರನ್ನು ಉಚ್ಚರಿಸಿದನು. ಈ ಅರ್ಥಾನುಸಂಧಾನಪೂರ್ವಕ ನಾಮೋಚ್ಚಾರಣೆಯಿಂದ ಅವನ ಎಲ್ಲ ಪಾಪಗಳು ನಾಶವಾಗಿ ಆತನು ಕಾಲಕ್ರಮದಲ್ಲಿ ಮೋಕ್ಷವನ್ನು ಪಡೆದುಕೊಂಡನು.

**ಮಹಿದಾಸನಾಗಿ ತಾಯಿಗೆ ತತ್ವವನು ಪೇಳ್ದೆ –**

ಆ ನಾರಾಯಣನು ಇತರಾದೇವಿಯಲ್ಲಿ "ಮಹಿದಾಸ"ನೆಂಬ ಹೆಸರಿನಿಂದ ಅವತರಿಸಿ ತಾಯಿಗೆ ತತ್ವವನ್ನು ಉಪದೇಶ ಮಾಡಿದನು. ಶ್ರೀ ಸುಮಧ್ವವಿಜಯ ಕಾವ್ಯದಲ್ಲಿ ಹೀಗೆ ತಿಳಿಸಿದ್ದಾರೆ.[20]

**ಮಹಿದಾಸ ಪೂಜ್ಯ ಚರಣೋ ದ್ವಿಜಾದಭೂತ್ ವಿದಿತಾತ್ ಸ ವಿಷ್ಣು ಯಶಸೋಽಮಲಾತ್ಮನಃ।**
**ಇಹ ಯೋ ಧಧೇ ಜಗತಿ ಪಾಪಶಾಂತಯೇ ಬಹುಧಾಮ ಹೇತಿ ಮತಿದೀಪ್ತಗೋಷ್ಠಿತಿಮ್॥**

ಶ್ರೀನಾರಾಯಣನು ವಿಷ್ಣುಸಂಕೀರ್ತನದಿಂದ ಶುದ್ಧಾಂತಃಕರಣನಾಗಿದ್ದ ಒಬ್ಬ ಪ್ರಸಿದ್ಧ ಬ್ರಾಹ್ಮಣನಿಂದ ಇತರಾದೇವಿಯಲ್ಲಿ "ಮಹಿದಾಸ" ರೂಪದಿಂದ ಅವತರಿಸಿದನು. ಬಹು ಉಪದ್ರವಗಳಿಂದ ಕೂಡಿದ ಈ ಜಗತ್ತಿನಲ್ಲಿ ಪಾಪ ಪರಿಹಾರಕ್ಕೆಂದು ಅನೇಕ ವೈಷ್ಣವತಂತ್ರಾತ್ಮಕವಾದ ಸಚ್ಛಾಸ್ತ್ರಗಳನ್ನು ಉಪದೇಶಿಸಿದನು.

ಬ್ರಹ್ಮಾಂಡ ಪುರಾಣದಲ್ಲಿ "ಮಹಿದಾಸ" ನ ಕುರಿತಾಗಿ ಹೀಗೆ ತಿಳಿಸಿದ್ದಾರೆ –

**ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್ ।**
**ಸಾಕ್ಷಾತ್ ಸ ಭಗವಾನ್ ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥**

ಬ್ರಾಹ್ಮಪುರಾಣದಲ್ಲಿ "ಮಹಿದಾಸ"ನ ಕುರಿತು ಹೀಗೆ ವರ್ಣಿಸಿದ್ದಾರೆ –

**ಅವತಾರ ಸ್ತೃತಿಯೋಽಸ್ಯ ದೇವರ್ಷಿಃ ಪ್ರಥಿತೋ ದಿವಿ।**
**ಮಹಿದಾಸಸ್ತ್ವೈತರೇಯೋ ಯಸ್ತಂತ್ರಂ ನಾರದೇಽವದತ್ ॥**

ಶ್ರೀಮದ್ ಭಾಗವತದಲ್ಲಿ ದೇವರ್ಷಿಗಳೆನಿಸಿದ "ಮಹಿದಾಸ"ರನ್ನು ವರ್ಣಿಸಿರುವ ಪರಿ ಹೀಗಿದೆ [21]

19. ಶ್ರೀಮದ್ ಭಾಗವತ (6–3–24)
20. ಶ್ರೀ ಸುಮಧ್ವವಿಜಯ ಮಹಾಕಾವ್ಯ – (8–35)
21. ಶ್ರೀಮದ್ ಭಾಗವತ (1–3–8)



**ತೃತೀಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ।**
**ತಂತ್ರಂ ಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥**

ಇಂಥ ಮಹಿದಾಸರೂಪೀ ನಾರಾಯಣನಿಗೆ ನಮಸ್ಕಾರವು.

**ಮುನಿಕಾಲಲೊದೆಯೆ ಎದ್ದು ಕರುಣಿಸಿದೆ ಕರುಣಾನಿಧಿ**
**ನಾರಾಯಣಾಯ ನಮೋ ನಾರಾಯಣ ।**
**ಮುನಿವೆಂಗಳರೆಯಾಗೆ ಪದಸೋಂಕಿಸ್ಯೆತ್ತಿದೆಯೋ**
**ನಾರಾಯಣಾಯ ನಮೋ ನಾರಾಯಣ ॥7॥**

ಹಿಂದೆ ಸರ್ವೋತ್ತಮ ವಸ್ತು ಯಾರು? ಎಂಬುದನ್ನು ನಿರ್ಣಯಿಸಲು ಹೊರಟ ಭೃಗು ಮುನಿಗಳು ಬ್ರಹ್ಮ, ಶಿವ ಇಬ್ಬರೂ ಸರ್ವೋತ್ತಮರಲ್ಲವೆಂದು ನಿರ್ಣಯಿಸಿ ವೈಕುಂಠಕ್ಕೆ ಬಂದು ಶೇಷಶಾಯಿಯಾದ ಶ್ರೀಹರಿಯ ವಕ್ಷಸ್ಥಳಕ್ಕೆ ಕಾಲಿನಿಂದ ಒದೆಯಲು ಆ ಕರುಣಾ ಸಮುದ್ರನಾದ ಶ್ರೀನಾರಾಯಣನು ಎದ್ದು ಬಂದು ಭೃಗುಮುನಿಗಳನ್ನು ಆದರಿಸಿ ಸತ್ಕಾರಮಾಡಿ ಕರುಣೆ ತೋರಿಸಲು, ಆ ಭೃಗುಮುನಿಗಳು ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಸಾರಿದರು. ಇಂಥ ಶ್ರೀನಾರಾಯಣನೇ ನಿನಗೆ ನಮಸ್ಕಾರಗಳು ಮತ್ತು ಗೌತಮ ಋಷಿಗಳ ಶಾಪದಿಂದ ಅಹಲ್ಯೆಯು ಕಲ್ಲಿನ ರೂಪದಲ್ಲಿರಲು ಶ್ರೀರಾಮದೇವರು ಆ ಕಲ್ಲಿಗೆ ಪಾದಸ್ಪರ್ಶ ಮಾಡಿದಾಗ ಪುನಃ ಅವಳು ಅಹಲ್ಯೆಯಾಗಿ ನಿಂತಳು. ಹೀಗೆ ಅಹಲ್ಯೆಯನ್ನು ಉದ್ಧರಿಸಿದ ಶ್ರೀರಾಮರೂಪೀ ನಾರಾಯಣನೇ ನಿನಗೆ ನಮಸ್ಕಾರಗಳು.

**ಮುನಿ ಕಾಲಲೊದೆಯೆ ಎದ್ದು ಕರುಣಿಸಿದೆ ಕರುಣಾನಿಧಿ –**

ಶ್ರೀಹರಿಯ ಸರ್ವೋತ್ತಮತ್ವವನ್ನು ಸ್ಥಾಪಿಸಲು ಹೊರಟ ಭೃಗುಮುನಿಗಳು – ಮೊದಲು ಬ್ರಹ್ಮದೇವರ ಬಳಿಗೆ ಬಂದರು. ಬ್ರಹ್ಮದೇವರು ಅವರನ್ನು ಸತ್ಕರಿಸಲಿಲ್ಲ. ಮುನಿಗಳು ಅವರ ಮೇಲೆ ಕೋಪಗೊಂಡರು. ಅಲ್ಲಿಂದ ಭೃಗು ಮುನಿಗಳು ಕೈಲಾಸಕ್ಕೆ ಹೋದರು. ಅಲ್ಲಿ ಶಿವನು ಪಾರ್ವತಿಯೊಡನೆ ಆಸೀನನಾಗಿದ್ದನು. ಇವರನ್ನು ನೋಡಿ ಕುಪಿತನಾಗಿ ಕೊಲ್ಲಲು ಹೋದಾಗ ಪಾರ್ವತಿಯು ತಡೆದು ಶಿವನನ್ನು ಸುಮ್ಮನಾಗಿಸಿದಳು. ನಂತರ ಭೃಗುಮುನಿಗಳು ವೈಕುಂಠಕ್ಕೆ ಹೋಗಿ ಶ್ರೀನಾರಾಯಣನ ವಕ್ಷಃಸ್ಥಳಕ್ಕೆ ತಮ್ಮ ಕಾಲಿನಿಂದ ಒದ್ದರು. ಕೂಡಲೇ ನಾರಾಯಣನು ಅವರನ್ನು ಕರುಣೆಯಿಂದ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದನು. ಇದನ್ನು ನೋಡಿದ ಭೃಗುಮುನಿಗಳು ಶ್ರೀನಾರಾಯಣನೇ ಸರ್ವೋತ್ತಮನೆಂದು ಸಾರಿದರು.

ಈ ವಿಷಯವನ್ನು ಶ್ರೀಮದ್ ಭಾಗವತ ದಶಮಸ್ಕಂಧದಲ್ಲಿ ವರ್ಣಿಸಲಾಗಿದೆ[22]

**ಸರಸ್ವತ್ಯಾಸ್ತಟೇ ರಾಜನ್ ಋಷಯಃ ಸತ್ರಮಾಸತ।**
**ವಿತರ್ಕಃ ಸಮಭೂತ್ತೇಷಾಂ ತ್ರಿಷ್ವಧೀಕೇಷುಕೋ ಮಹಾನ್ ॥**

22. ಶ್ರೀಮದ್ ಭಾಗವತ (10–89–1)



**ತಸ್ಯ ಜಿಜ್ಞಾಸಯಾ ತೇ ವೈ ಭೃಗುಂ ಬ್ರಹ್ಮಸುತಂ ನೃಪ ।**
**ತಜ್ಞಪ್ತ್ಯೈ ಪ್ರೇಷಯಾಮಾಸುಃ ಸೋಽಭ್ಯಗಾತ್ ಬ್ರಹ್ಮಣಃ ಸಭಾಂ ॥**
**ನ ತಸ್ಮೈ ಪ್ರಹ್ವಣಂ ಸ್ತೋತ್ರಂ ಚಕ್ರೇ ಸತ್ವ ಪರೀಕ್ಷಯಾ।**
**ತಸ್ಮೈ ಚುಕ್ರೋಧ ಭಗವಾನ್ ಪ್ರಜ್ವಲನ್ ಸ್ವೇನ ತೇಜಸಾ ॥**

**ತತಃ ಕೈಲಾಸಮಗಮತ್ ಸ ತಂ ದೇವೋ ಮಹೇಶ್ವರಃ ।**
**ಪರಿರಬ್ಧುಂ ಸಮಾರೇಭೇ ಉತ್ಥಾಯ ಭ್ರಾತರಂ ಮುದಾ ॥**

**ನೈಚ್ಛತ್ತ್ವಮಸ್ಯುತ್ಪಥಗಂ ಇತಿ ದೇವಶ್ಚುಕೋಪಹ ।**
**ಶೂಲಮುದ್ಯಮ್ಯ ತಂ ಹಂತುಮಾರೇಭೇ ತಿಗ್ಮಲೋಚನಃ ॥**

**ಪತಿತ್ವಾ ಪಾದಯೋರ್ದೇವೀ ಸಾಂತ್ವಯಾಮಾಸ ತಂ ಗಿರಾ।**
**ಅಥೋಜಗಾಮ ವೈಕುಂಠಂ ಯತ್ರ ದೇವೋ ಜನಾರ್ದನಃ ॥**

**ಶಯಾನಂ ಶ್ರಿಯ ಉತ್ಸಂಗೇ ಪದಾ ವಕ್ಷಸ್ಯತಾಡಯತ್।**
**ತತ ಉತ್ಥಾಯ ಭಗವಾನ್ ಸಹಲಕ್ಷ್ಮ್ಯಾ ಸತಾಂಗತಿಃ ॥**

**ಸ್ವತಲ್ಪಾದವರುಹ್ಯ ಅಥ ನನಾಮ ಶಿರಸಾ ಮುನಿಮ್ ।**
**ಆಹ ತೇ ಸ್ವಾಗತಂ ಬ್ರಹ್ಮನ್ ನಿಷೀದತ್ರಾಸನೇಕ್ಷಣಮ್ ॥**

ಹೀಗೆ ಭೃಗುಮುನಿಗಳನ್ನು ಕರುಣಾನಿಧಿಯಾದ ಶ್ರೀನಾರಾಯಣನು ಕಾಲಿನಿಂದ ಒದ್ದ ಅವರನ್ನು ಸತ್ಕರಿಸಿದನು. ಇಂಥ ನಾರಾಯಣನೇ ನಿನಗೆ ನಮಸ್ಕಾರ.

**ಮುನಿವೆಂಗಳ ರೆಯಾಗೆ ಪದಸೋಂಕಿಸ್ಯೆತ್ತಿದೆಯೋ।**

ಗೌತಮ ಋಷಿಗಳ ಶಾಪದಿಂದ ಅಹಲ್ಯೆಯು ಕಲ್ಲಿನ ರೂಪದಲ್ಲಿರುವಾಗ ಶ್ರೀ ರಾಮದೇವರು ತಮ್ಮ ಪಾದಸ್ಪರ್ಶದಿಂದ ಉದ್ಧರಿಸಿದ ವಿಷಯವು ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಉಕ್ತವಾಗಿದೆ.[23]

**ಅಥೋ ಅಹಲ್ಯಾಂ ಪತಿನಾಭಿಶಪ್ತಾಂ**
**ಪ್ರಧರ್ಷಣಾದಿಂದ್ರ ಕೃತಾಚ್ಛಿಲೀ ಕೃತಾಮ್ ।**
**ಸ್ವದರ್ಶನಾನ್ಮಾನುಷತಾಮುಪೇತಾಂ**
**ಸುಯೋಜಯಾಮಾಸ ಸ ಗೌತಮೇನ॥**

ಅಹಲ್ಯೆಯು ಇಂದ್ರದೇವರು ಮಾಡಿದ ಬಲಾತ್ಕಾರದ ಕಾರಣದಿಂದಾಗಿ ತನ್ನ ಪತಿಯಾದ ಗೌತಮರಿಂದ ಶಪಿಸಲ್ಪಟ್ಟು ಶಿಲೆಯಂತೆ ಆಗಿದ್ದಳು. ಶ್ರೀರಾಮದೇವರ ದರ್ಶನದಿಂದ ಅವಳು ಪುನಃ ಮನುಷ್ಯರಂತೆ ಆದಳು. ಅಂತಹ ಅಹಲ್ಯೆಯನ್ನು ಶ್ರೀರಾಮದೇವರು ಗೌತಮರೊಂದಿಗೆ ಚೆನ್ನಾಗಿ ಜೊತೆಗೂಡಿಸಿದರು.

23. ಶ್ರೀ ಮ. ಭಾ. ತಾ. ನಿ. (4–10)



ಇಲ್ಲಿ ಶ್ರೀರಾಮದೇವರ ದರ್ಶನದಿಂದ ಅಹಲ್ಯೆಯು ಮನುಷ್ಯಳಾದಳು ಎಂದಿದೆ. ಆದರೆ ಶ್ರೀದಾಸರು ಪಾದಸ್ಪರ್ಶದಿಂದ ಉದ್ಧಾರ ಹೊಂದಿದಳು ಎಂದಿದ್ದಾರೆ.

ಶ್ರೀ ಪದ್ಮಮಹಾಪುರಾಣದ ವಾಕ್ಯವನ್ನು ಇಲ್ಲಿ ಗಮನಿಸಬೇಕು.

**ಗಚ್ಛತಸ್ತಸ್ಯ ರಾಮಸ್ಯ ಪಾದಾಬ್ಜೇನ ಮಹಾತ್ಮನಃ ।**
**ಅಭೂತ್ ಸುರೂಪಾ ವನಿತಾ ಸಮಾಕ್ರಾಂತಾ ಮಹಾಶಿಲಾ॥**
**ಶಾಪದಗ್ಧಾ ಪುರಾಭರ್ತ್ರಾ ಗೌತಮೇನ ದ್ವಿಜನ್ಮನಾ ।**
**ಅಹಲ್ಯಾ ರಘುನಾಥಸ್ಯ ಪಾದಸ್ಪರ್ಶಾತ್ ಶುಭಾಽಭವತ್ ॥** [24]

**(ಪದ್ಮಪುರಾಣ ಉತ್ತರಖಂಡ 242–134)**

ಶ್ರೀ ಪದ್ಮಮಹಾಪುರಾಣದ ವಾಕ್ಯದ ಪ್ರಕಾರ ಅಹಲ್ಯೆಯು ಶ್ರೀರಾಮದೇವರ ಪಾದಸ್ಪರ್ಶದಿಂದ ಮನುಷ್ಯರಂತೆ ಆದಳೆಂದು ತಿಳಿಯಬೇಕು.

**ಮಖವರಕ್ಷಿಸಿ ರಾಜ ಋಷಿಗಭೀಷ್ಟೆಯನಿತ್ತೆ**
**ನಾರಾಯಣಾಯ ನಮೋ ನಾರಾಯಣ**
**ಮಕರಧ್ವಜಾರಿ ಧನು ಮುರಿದವನಿಜೇಶ**
**ನಾರಾಯಣಾಯ ನಮೋ ನಾರಾಯಣ ॥8॥**

ನಾರಾಯಣನೇ ! ನೀನು ವಿಶ್ವಾಮಿತ್ರ ರಾಜರ್ಷಿಯ ಯಜ್ಞವನ್ನು ರಕ್ಷಿಸಿ ಅವರ ಅಭೀಷ್ಟವನ್ನು ಪೂರೈಸಿದೆ. ಅಂತಹ ನಿನಗೆ ನಮಸ್ಕಾರವು. ಮಕರಧ್ವಜ ಎಂದರೆ ಮನ್ಮಥ. ಅವನ ಅರಿ. ಶತ್ರು ಶಿವ. ಇವನ ಧನುಸ್ಸನ್ನು ಮುರಿದು ಅವನಿಜಾ ಅಂದರೆ ಸೀತೆಯನ್ನು ಸ್ವೀಕರಿಸಿದ ಆ ರಾಮರೂಪನಾದ ನಾರಾಯಣ. ಇಂಥ ನಾರಾಯಣನಿಗೆ ನಮಸ್ಕಾರವು.

ಶ್ರೀರಾಮನು ವಿಶ್ವಾಮಿತ್ರ ರಾಜರ್ಷಿಯ ಯಜ್ಞವನ್ನು ರಕ್ಷಿಸಿದ ವಿಷಯವು ಶ್ರೀ ಮ. ಭಾ. ತಾ. ನಿರ್ಣಯದಲ್ಲಿ ಉಕ್ತವಾಗಿದೆ.

**ತೇನಾರ್ಥಿತೋ ಯಜ್ಞರಿರಕ್ಷಯೈವ**
**ಕೃಛ್ರೇಣ ಪಿತ್ರಾಽಸ್ಯ ಭಯಾದ್ವಿಸೃಷ್ಟಃ ।**
**ಜಗಾಮ ರಾಮಃ ಸಹ ಲಕ್ಷ್ಮಣೇನ**
**ಸಿದ್ಧಾಶ್ರಮಂ ಸಿದ್ಧ ಜನಾಭಿವಂದ್ಯಃ ॥ (4–5)**

ಆ ವಿಶ್ವಾಮಿತ್ರರಾಜರ್ಷಿಯಿಂದ ತಮ್ಮ ಯಜ್ಞ ಸಂರಕ್ಷಣೆಗೆಂದು ಪ್ರಾರ್ಥಿತನಾದ ಶ್ರೀರಾಮನು, ಅವನ ತಂದೆಯಾದ ದಶರಥನಿಂದ, ವಿಶ್ವಾಮಿತ್ರರು ಶಪಿಸಬಹುದು ಎಂಬ

24. ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ – ದ್ವಿತೀಯ ಭಾಗ
ಶ್ರೀ ಸತ್ಯಧರ್ಮೀಯ ಟಿಪ್ಪಣಿ (ಸಂಸ್ಕೃತ ಆವೃತ್ತಿ)
ಶ್ರೀ ವಿಶ್ವಮಧ್ವಮಹಾಪರಿಷತ್ – ಬೆಂಗಳೂರು ಪ್ರಕಟಿತ –

ಭಯದಿಂದ, ಬಹುಕಷ್ಟದಿಂದ ಕಳಿಸಲ್ಪಟ್ಟವನಾಗಿ ಲಕ್ಷ್ಮಣನಿಂದ ಕೂಡಿಕೊಂಡು ಸಿದ್ಧಾಶ್ರಮಕ್ಕೆ ತೆರಳಿದನು. ಅವನು ಸಿದ್ಧಜನರಿಂದ ಚೆನ್ನಾಗಿ ಪೂಜಿತನಾದ ಮಹಾಮಹಿಮನು,

**ಅಥೋ ಜಘಾನಾಶು ಶರೇಣ ತಾಟಕಾಂ**
**ವರಾದ್ವಿಧಾತುಸ್ತದನನ್ಯವಧ್ಯಾಮ್ ।**
**ರರಕ್ಷಯಜ್ಞಂ ಚ ಮುನೇರ್ನಿಹತ್ಯ**
**ಸುಬಾಹುಮೀಶಾನಗಿರಾ ವಿಮೃತ್ಯುಮ್ ॥ (4–7)**

ಅನಂತರ ಶ್ರೀರಾಮನು ಬ್ರಹ್ಮದೇವರ ವರದಿಂದಾಗಿ ತನ್ನ ಹೊರತು ಇತರ ಎಲ್ಲರಿಂದಲೂ ಅವಧ್ಯಳಾಗಿದ್ದ ತಾಟಕೆಯನ್ನು ಒಂದು ಬಾಣದಿಂದ ಅನಾಯಾಸವಾಗಿ ಸಂಹರಿಸಿದನು. ಅಲ್ಲದೇ ವಿಶ್ವಾಮಿತ್ರರ ಯಜ್ಞಭೂಮಿಯಲ್ಲಿ ರುದ್ರದೇವರ ವರದಿಂದಾಗಿ ಸಾವಿಲ್ಲದವನಾಗಿದ್ದ ಸುಬಾಹುವನ್ನು ಸಂಹರಿಸಿ, ಆ ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿ ಅವರ ಅಭೀಷ್ಟವನ್ನು ಪೂರೈಸಿದನು. ಇಂಥ ರಾಮರೂಪೀ ಶ್ರೀನಾರಾಯಣನಿಗೆ ನಮಸ್ಕಾರವು.

ಈ ಶ್ರೀರಾಮನೇ ಶಿವಧನುಸ್ಸನನ್ನು ಮುರಿದು ಅವನಿಜಾ ಎನಿಸಿದ ಸೀತಾದೇವಿಯನ್ನು ಸ್ವೀಕರಿಸಿದನು. ಶ್ರೀ ಮ.ಭಾ. ತಾ. ನಿರ್ಣಯದಲ್ಲಿ ಹೀಗೆ ತಿಳಿಸಿದ್ದಾರೆ.

**ಸಮಧ್ಯತಸ್ತತ್ ಪ್ರವಿಭಜ್ಯಲೀಲಯಾ**
**ಯಥೇಕ್ಷುದಂಡಂ ಶತಮನ್ಯುಕುಂಜರಃ ।**
**ವಿಲೋಕಯನ್ ವಕ್ತ್ರಮೃಷೇರವಸ್ಥಿತಃ**
**ಸಲಕ್ಷ್ಮಣಃ ಪೂರ್ಣತನುರ್ಯಥಾ ಶಶೀ ॥4–26)**

ಇಂದ್ರನ ಆನೆಯಾದ ಐರಾವತವು ಕಬ್ಬಿನಕೋಲನ್ನು ಹೇಗೋ ಹಾಗೆ ಶ್ರೀರಾಮನು ಶಿವಧನುಸ್ಸನ್ನು ಮಧ್ಯಕ್ಕೆ ಸರಿಯಾಗಿ ಮುರಿದು ಹಾಕಿದನು. ಲಕ್ಷ್ಮಣ ಸಮೇತನಾಗಿ ವಿಶ್ವಾಮಿತ್ರ ಮುನಿಯ ಮುಖ ನೋಡುತ್ತ, ಹದಿನಾರುಕಲೆಗಳಿಂದ ಕೂಡಿದ ಪೂರ್ಣಚಂದ್ರನಂತೆ ಶೋಭಿಸುತ್ತ ನಿಂತನು.

ನಂತರ ಸೀತಾದೇವಿಯು ಕಮಲಗಳಿಂದ ಕೂಡಿದ ಮಾಲೆಯನ್ನು ಹಿಡಿದುಕೊಂಡು ಶ್ರೀರಾಮನ ಬಳಿಗೆ ಸಾರಿ ಅವನ ಕೊರಳಲ್ಲಿ ಹಾಕಿದವಳಾಗಿ ಅವನ ಎಡ ಪಕ್ಕದಲ್ಲಿ ನಿಂತಳು. ರಮೇಶನಾದ ಶ್ರೀಹರಿಯು ಮಹಾಲಕ್ಷ್ಮಿಯಾದ ಸೀತೆಯನ್ನು ಸ್ವೀಕರಿಸಿ ಎಲ್ಲಾ ಲೋಕದ ಜನರಿಗೆ ಸಂತೋಷ ಉಂಟುಮಾಡಿದನು.

ಇಂಥ ರಾಮರೂಪೀ ಶ್ರೀನಾರಾಯಣನಿಗೆ ನಮಸ್ಕಾರವು.

**ಶುಭಕಪೀಶಗೆ ಅಭಯವರವಿತ್ತು ಕೈಪಿಡಿದೆ.**
**ನಾರಾಯಣಾಯ ನಮೋ ನಾರಾಯಣ ।**
**ಶುಭಕಂಠನಂಜಿಕೆಯ ಹನುಮ ಹೇಳಲು ಕಳೆದೆ**
**ನಾರಾಯಣಾಯ ನಮೋ ನಾರಾಯಣ ॥9॥**

ಶ್ರೀರಾಮಾವತಾರದಲ್ಲಿ ಸುಗ್ರೀವನಿಗೆ ಅಭಯವರವಿತ್ತು ಅವನ ಕೈಹಿಡಿದು ಸಲುಹಿದ



ನಾರಾಯಣ ನಿನಗೆ ನಮಸ್ಕಾರವು. ಋಷ್ಯಮೂಕ ಪರ್ವತಕ್ಕೆ ಬಂದ ಶ್ರೀರಾಮಲಕ್ಷ್ಮಣರನ್ನು ಸುಗ್ರೀವನು ಅವರು ವಾಲಿಯ ಗೂಢಚಾರರೆಂದು ಹೆದರಿದಾಗ ಶ್ರೀ ಹನುಮಂತ ದೇವರು ನಿಜತಿಳಿದುಕೊಂಡು ಬಂದು ಅವರ ಸ್ನೇಹ ಮಾಡಿಸಿದಾಗ ಶ್ರೀರಾಮದೇವರು ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ವಾನರರಾಜ್ಯಾಧಿಪತಿಯನ್ನಾಗಿ ಮಾಡಿದರು. ಇಂಥ ಶ್ರೀರಾಮರೂಪೀ ನಾರಾಯಣನೇ ನಿನಗೆ ನಮಸ್ಕಾರವು.

ಸುಗ್ರೀವನನ್ನು ಶ್ರೀರಾಮದೇವರು ರಕ್ಷಿಸಿದ ವಿಷಯವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ಶ್ರೀ ಮ. ಭಾ. ತಾ. ನಿರ್ಣಯದಲ್ಲಿ ತಿಳಿಸಿರುವರು.

**ದೇಹೇऽಪಿ ಯತ್ರ ಪವನೋऽತ್ರ ಹರಿರ್ಯತೋऽಸೌ**
**ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಮ್ ।**
**"ಕಸ್ಮಿನ್‌ವಹಂ" ತ್ವಿತಿ ತಥೈವ ಹಿ ಸೋऽವತಾರೇ**
**ತಸ್ಮಾತ್ ಸ ಮಾರುತಿಕೃತೇ ರವಿಜಂ ರರಕ್ಷ ॥ (5–46)**

ಸಕಲ ಪ್ರಾಣಿಗಳ ದೇಹಗಳಲ್ಲೂ ಸಹ ಎಲ್ಲಿ ವಾಯುದೇವರು ಇರುವರೋ ಅಲ್ಲಿಯೇ ಶ್ರೀಹರಿಯೂ ನೆಲೆಸಿರುವನು. ಮತ್ತು ಎಲ್ಲಿ ಶ್ರೀಹರಿಯು ನೆಲೆಸಿರುವನೋ ಅಲ್ಲಿಯೇ ಶ್ರೀ ವಾಯುದೇವರೂ ಇರುವರು ಎಂಬುದಾಗಿ ವೇದ ವಚನ ಪ್ರಸಿದ್ಧವಾಗಿದೆ. "ಕಸ್ಮಿನ್ವಹಂ ತು" ಎಂಬುದೇ ಆ ಪ್ರಸಿದ್ಧ ವೇದ ವಚನ. ಇದು ಅವತಾರಗಳಲ್ಲಿಯೂ ಹಾಗೆಯೇ ಸರಿ. ಅದಕ್ಕೆಂದೇ ಶ್ರೀರಾಮದೇವರು ಅಂತಹ ವಾಯುಪುತ್ರನಾದ ಹನುಮಂತನಿಗೋಸ್ಕರವಾಗಿ ಸೂರ್ಯಪುತ್ರನಾದ ಸುಗ್ರೀವನನ್ನು (ಪಾಲಿಸಿದನು) ರಕ್ಷಿಸಿದನು. ಇಂತಹ ನಾರಾಯಣನಿಗೆ ನಮಸ್ಕಾರವು.

ಋಷ್ಯಮೂಕ ಪರ್ವತದ ಕಡೆಗೆ ಬಂದ ಶ್ರೀರಾಮಲಕ್ಷ್ಮಣರನ್ನು ಸುಗ್ರೀವನು ಅವರು ವಾಲಿಯ ಗೂಢಚಾರರಿರಬಹುದೆಂದು ಅಂಜಿಕೆ ಹೊಂದಿದನು. ಅಷ್ಟೇ ಅಲ್ಲ ಅಂಜಿಕೆಯಿಂದ ಕೂಡಿದವನಾಗಿ ಸೂರ್ಯಪುತ್ರ ಸುಗ್ರೀವ ಸಮೇತರಾದ ಎಲ್ಲ ಕಪಿಗಳೂ ಹಾರುತ್ತ ಓಡತೊಡಗಿದರು. ವಾಯುಪುತ್ರನಾದ ಮಾರುತಿಯು ಅವರೆಲ್ಲರನ್ನು ತಡೆದು ನಿಲ್ಲಿಸಿದನು. ಇದನ್ನು ಈ ಕೆಳಗಿನ ಶ್ಲೋಕದಲ್ಲಿ ತಿಳಿಸಿಕೊಟ್ಟಿದ್ದಾರೆ.

**ಸಮಾಗತೇ ತು ರಾಘವೇ ಪ್ಲವಂಗಮಾಃ ಸಸೂರ್ಯಜಾಃ ।**
**ವಿಪುಪ್ಲುವುರ್ಭಯಾರ್ದಿತಾ ನ್ಯವಾರಯಚ್ಚ ಮಾರುತಿಃ ॥ ತಾ.ನಿ. (5–50)**

ನಂತರ ಸುಗ್ರೀವನು ವಾಲಿಯನ್ನು ಕೊಂದು ರಾಜ್ಯವನ್ನು ಕೊಡಿಸಬೇಕೆಂದು ಕೇಳಿಕೊಂಡಿದ್ದರಿಂದ ಶ್ರೀರಾಮದೇವರು ವಜ್ರಸದೃಶವಾದ ಬಾಣವನ್ನು ಇಂದ್ರಪುತ್ರನಾದ ವಾಲಿಯ ಮೇಲೆ ಪ್ರಯೋಗಿಸಿದರು.

ಆಗ **ಇಂದ್ರಾತ್ಮಜೋ ಗಿರಿರಿವಾಪತದಾಶು ಸನ್ನಃ ॥** (6–18)

ಉಕ್ತಿಯಂತೆ ಇಂದ್ರಪುತ್ರನಾದ ವಾಲಿಯು ಗಿರಿಯಂತೆ ತಕ್ಷಣ ಕೆಳಗೆ ಬಿದ್ದು ಪ್ರಾಣ ಕಳೆದುಕೊಂಡನು.



ಹೀಗೆ ಶ್ರೀರಾಮದೇವರು ಸುಗ್ರೀವನ ಅಂಜಿಕೆಯನ್ನು ಕಳೆದು ಅವನನ್ನು ರಕ್ಷಿಸಿದರು. ಇಂಥ ರಾಮರೂಪೀ ನಾರಾಯಣನಿಗೆ ನಮಸ್ಕಾರವು.

**ಶರಣು ಹೊಕ್ಕಿರೆ ವಿಭೀಷಣಗರಸುತನ ಕೊಟ್ಟೆ**
**ನಾರಾಯಣಾಯ ನಮೋ ನಾರಾಯಣ**
**ಶರದಿರಾವಣನರಿದು ಸುರರ ಸಂಕಟ ಹರಿದೆ**
**ನಾರಾಯಣಾಯ ನಮೋ ನಾರಾಯಣ ॥10॥**

ರಾವಣನ ತಮ್ಮನಾದ ವಿಭೀಷಣನು ಬಂದು ಶ್ರೀರಾಮದೇವರನ್ನು ಶರಣು ಹೊಂದಿದಾಗ ಶ್ರೀರಾಮದೇವರು ಅವನನ್ನು ಸ್ವೀಕಾರ ಮಾಡಿ "ಭಾವಿಲಂಕಾಧಿಪತಿ" ಎಂಬುದಾಗಿ ಹೇಳಿ ಅವನಿಗೆ ಅರಸು ಪದವಿಯನ್ನು ಕೊಟ್ಟರು. ಇಂಥ ಶ್ರೀರಾಮರೂಪೀ ನಾರಾಯಣನೇ ನಿನಗೆ ನಮಸ್ಕಾರ. ಮುಂದೆ ಶ್ರೀರಾಮ ರಾವಣರಲ್ಲಿ ಯುದ್ಧವು ನಡೆದಾಗ ಆ ಯುದ್ಧದಲ್ಲಿ ಶ್ರೀರಾಮದೇವರು ಒಂದೇ ಬಾಣದಿಂದ ರಾವಣನನ್ನು ಸಂಹಾರಮಾಡಿ ಆ ದೇವತೆಗಳ ಸಂಕಟವನ್ನು ಪರಿಹರಿಸಿದರು. ಇಂಥ ಶ್ರೀರಾಮರೂಪೀ, ನಾರಾಯಣನೇ ನಿನಗೆ ನಮಸ್ಕಾರವು.

ದೇವದೇವನಾದ ಶ್ರೀರಾಮನು ದಕ್ಷಿಣ ಸಮುದ್ರವನ್ನು ತಲುಪಿದಾಗ, ರಾವಣನ ತಮ್ಮನಾದ ವಿಭೀಷಣನು ಬಂದು ಶ್ರೀರಾಮದೇವರಿಗೆ ಶರಣಾಗತನಾದನು. ಆಗ ಹನುಮಂತದೇವರು "ಈ ವಿಭೀಷಣನು ಶ್ರೀರಾಮನ ಚರಣಗಳಲ್ಲಿ ಭಕ್ತನಾಗಿದ್ದಾನೆ. ಆದ್ದರಿಂದ ಇವನು ಖಚಿತವಾಗಿಯೂ ಗ್ರಾಹ್ಯನೇ ಆಗಿದ್ದಾನೆ. ರಾಕ್ಷಸನಾದ ರಾವಣನು ಇನ್ನು ನಾಶಹೊಂದುವನೆಂದು ತಿಳಿದುರಾಜ್ಯವನ್ನು ಅನುಭವಿಸಲೆಂದು ಶರಣಾಗತನಾಗಿದ್ದಾನೆ" ಎಂದು ಹೇಳಿದರು. ಇದು ಈ ಕೆಳಗಿನ ತಾತ್ಪರ್ಯ ನಿರ್ಣಯದ ಶ್ಲೋಕದಿಂದ ಸ್ಪಷ್ಟವಾಗುತ್ತದೆ.

**ಅತ್ರಾಹ ರೂಪಮಪರಂ ಬಲದೇವತಾಯಾಃ**
**ಗ್ರಾಹ್ಯಃ ಸ ಏಷ ನಿತರಾಂ ಶರಣಂ ಪ್ರಪನ್ನಃ ।**
**ಭಕ್ತಶ್ಚ ರಾಮ ಪದಯೋರ್ವಿನಶಿಷ್ಣು ರಕ್ಷೋ**
**ವಿಜ್ಞಾಯ ರಾಜ್ಯಮುಪಭೋಕ್ತುಮಿಹಾಭಿಯಾತಃ ॥ (8–5)**

ಶ್ರೀ ಹನುಮಂತದೇವರು ಹೀಗೆ ನುಡಿಯಲು, ಶ್ರೀರಾಮದೇವರು –

**ಇತ್ಯುಕ್ತವತ್ಯಥ ಹನೂಮತಿ ದೇವದೇವಃ**
**ಸಂಗೃಹ್ಯ ತದ್ವಚನಮಾಹ ಯಥೈವಪೂರ್ವಮ್ ।**
**ಸುಗ್ರೀವ ಹೇತುತ ಇಮಂ ಸ್ಥಿರಮಾಗ್ರಹಿಷ್ಯೇ**
**ಪಾದಪ್ರಪನ್ನಮಿದಮೇವ ಸದಾವ್ರತಂ ಮೇ ॥ (8–6)**

ಹಿಂದೆ ಸುಗ್ರೀವನ ವಿಚಾರದಲ್ಲಿ ಹೇಗೋ ಹಾಗೆ ಈಗಲೂ ಹನುಮಂತದೇವರ ಮಾತನ್ನು ಒಪ್ಪಿ "ನನ್ನ ಚರಣಗಳಿಗೆರಗಿರುವ ಇವನನ್ನು ಖಚಿತವಾಗಿ ಸ್ವೀಕರಿಸುತ್ತೇನೆ. ಇದುನನ್ನ ವ್ರತವೇ – ಆಗಿದೆ" ಎಂದರು.



ಇಲ್ಲಿ ವಾಲ್ಮೀಕಿರಾಮಾಯಣದ ಮಾತನ್ನು ಸ್ಮರಿಸಬಹುದು.

**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತತ್ ವ್ರತಂ ಮಮ ॥ ವಾ.ರಾ. (6–18–33)**

ನಂತರ ವಿಭೀಷಣನನ್ನು ಲಂಕಾಧಿಪತಿಯನ್ನಾಗಿ ಮಾಡಿದ ವಿಷಯವು ಹೀಗೆ ತಿಳಿದು ಬರುತ್ತದೆ.

**ಇತ್ಯುಕ್ತವಾಕ್ಯ ಉತ ತಂ ಸ್ವಜನಂ ವಿಧಾಯ**
**ರಾಜ್ಯೇಽಭ್ಯಷೇಚಯದಪಾರಸುಸತ್ತ್ವರಾಶಿಃ ।**
**ಮತ್ವಾ ತೃಣೋಪಮಮಶೇಷಸದಂತಕಂ ತಂ**
**ರಕ್ಷಃ ಪತೇಸ್ತ್ವವರಜಸ್ಯ ದದೌಸ ಲಂಕಾಮ್ ॥8–8**

ಶ್ರೀರಾಮದೇವರು ವಿಭೀಷಣನನ್ನು ತನ್ನ ಭೃತ್ಯನನ್ನಾಗಿ ಮಾಡಿಕೊಂಡು, ಅವನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದರು. ಎಣೆಯಿಲ್ಲದ ಉತ್ತಮವಾದ ಬಲ ಮತ್ತು ಜ್ಞಾನಗಳ ಖಣಿಯಾದ ಅವರು ಸಕಲ ಸಜ್ಜನರ ಪಾಲಿಗೆ ಯಮಸದೃಶನಾಗಿದ್ದ ರಾವಣನನ್ನು ಹುಲ್ಲುಕಡ್ಡಿಗೆ ಸಮಾನನೆಂದು ಕಡೆಗಣಿಸಿ ಅವನ ತಮ್ಮನನ್ನು ಭಾವಿ ಲಂಕಾಧಿಪತಿಯನ್ನಾಗಿ ಮಾಡಿದರು.

**ಬಾಣೇನ ವಜ್ರಸದೃಶೇನ ಸ ಭಿನ್ನಹೃತ್ಕೋ**
**ರಕ್ತಂ ವಮನ್ ನ್ಯಪತದಾಶು ಮಹಾವಿಮಾನಾತ್ (8–210)**

ಉಕ್ತಿಯಂತೆ ಶ್ರೀರಾಮದೇವರು ವಜ್ರಸದೃಶವಾದ ಬಾಣದಿಂದ ರಾವಣನ ಹೃದಯವನ್ನು ಸೀಳಿದರು. ರಾವಣನು ರಕ್ತ ಕಾರುತ್ತ ದೊಡ್ಡ ವಿಮಾನದಿಂದ ತತ್‌ಕ್ಷಣವೇ ನೆಲಕ್ಕುರುಳಿದನು.

ಇದರಿಂದ ದೇವತೆಗಳು ಸಂಕಟದಿಂದ ಪಾರಾಗಿ ಸಂತೋಷ ಹೊಂದಿದರು – ಇಂಥ ಶ್ರೀರಾಮರೂಪೀ ನಾರಾಯಣನೇ ನಿನಗೆ ನಮಸ್ಕಾರವು.

**ಅನುಜನಗ್ನಿಗೆ ಧುಮುಕಲವಧಿ ಮೀರದೆ ಪೊರೆದೆ**
**ನಾರಾಯಣಾಯ ನಮೋ ನಾರಾಯಣ ।**
**ಅನಿಮಿಷರ ನಿಕರಕತಿ ಆಹ್ಲಾದ ಬೆಳೆಯಿಸಿದೆ ॥**
**ನಾರಾಯಣಾಯ ನಮೋ ನಾರಾಯಣ ॥ 11 ॥**

ಶ್ರೀರಾಮದೇವರು 14 ವರ್ಷ ವನವಾಸ ಮುಗಿದ ಮೇಲೆ ಕೂಡಲೇ ಬಂದು ರಾಜ್ಯ ಸ್ವೀಕರಿಸುವೆನೆಂದು ಭರತನಿಗೆ ಹೇಳಿ ಕಳಿಸಿದ್ದರು. ಆಗ ಭರತ ಅಣ್ಣಾ! ನೀನು ಒಂದು ವೇಳೆ ಹದಿನಾಲ್ಕನೆಯ ವರ್ಷ ಮುಗಿದ ಮರುದಿನ ಬಾರದಿದ್ದರೆ ನಾನು ಅಗ್ನಿ ಪ್ರವೇಶ ಮಾಡುವೆ ಎಂದಿದ್ದ. ಕಾರಣ ಶ್ರೀರಾಮದೇವರು ಹನುಮಂತ ದೇವರ ಮೂಲಕ ಹೇಳಿ ಕಳುಹಿಸಿ ಆ ಭಕ್ತಿ ಭರಿತನಾದ ಭರತನನ್ನು ರಕ್ಷಿಸಿದರು. ನಂತರ ಶ್ರೀರಾಮದೇವರು ಅನೇಕ ವರ್ಷಗಳವರೆಗೆ ರಾಜ್ಯವಾಳಿ ದೇವತೆಗಳ ಪ್ರಾರ್ಥನೆಯಂತೆ ವೈಕುಂಠಕ್ಕೆ ಮರಳಿ ಬಂದು ಆ ಎಲ್ಲ ದೇವತೆಗಳ ಸಮೂಹಕ್ಕೆ ಸಂತೋಷ ವೃದ್ಧಿಪಡಿಸಿದರು.



**ವಿವರಣೆ : –** ಹದಿನಾಲ್ಕು ವರ್ಷ ವನವಾಸ ಮುಗಿದ ಕೂಡಲೇ ಬಂದು ರಾಜ್ಯಸ್ವೀಕಾರ ಮಾಡದಿದ್ದರೆ – ಭರತ ಅಗ್ನಿಪ್ರವೇಶ ಮಾಡುವೆನೆಂದು ಹೇಳಿದ್ದರಿಂದ ಶ್ರೀರಾಮದೇವರು ಹನುಮಂತ ದೇವರ ಮೂಲಕ ಹೇಳಿ ಕಳುಹಿಸುತ್ತಾರೆ.

**ದದರ್ಶಚಾಸೌ ಭರತಂ ಹುತಾಶನಂ**
**ಪ್ರವೇಷ್ಟುಕಾಮಂ ಜಗದೀಶ್ವರಸ್ಯ ।**
**ಅದರ್ಶನಾತ್ ತಂ ವಿನಿವಾರ್ಯ ರಾಮಂ**
**ಸಮಾಗತಂ ಚಾಸ್ಯ ಶಶಂಸ ಮಾರುತಿಃ ॥ ಶ್ರೀ ಮ. ಭಾ. ತಾ.ನಿ. 8–227**

ಜಗದೀಶ್ವರನಾದ ಶ್ರೀರಾಮನನ್ನು ಹದಿನಾಲ್ಕು ವರ್ಷಗಳು ಕಳೆದರೂ ತಾನು ಕಾಣಲಾಗಲಿಲ್ಲ ಎಂದರೆ ಶ್ರೀರಾಮನು ಅಯೋಧ್ಯೆಗೆ ಮರಳಿಬರಲಿಲ್ಲ ಎಂಬ ಕಾರಣದಿಂದ ಅಗ್ನಿ ಪ್ರವೇಶಕ್ಕೆ ಸಿದ್ಧವಾಗುತ್ತಿದ್ದ ಭರತನನ್ನು ಹನುಮಂತದೇವರು ಕಂಡರು. ಭರತನನ್ನು ಹಾಗೆ ಮಾಡದಂತೆ ತಡೆದು ಅವನಿಗೆ ಶ್ರೀರಾಮನು ಆಗಮಿಸುತ್ತಿರುವ ವಾರ್ತೆಯನ್ನು ಹೇಳಿದರು.

**ಶ್ರುತ್ವಾ ಪ್ರಮೋದೋರುಭರಃ ಸ ತೇನ**
**ಸಹೈವ ಪೌರೈಃ ಸಹಿತಃ ಸಮಾತೃಕಃ ।**
**ಶತ್ರುಘ್ನಯುಕ್ತೋಽಭಿಸಮೇತ್ಯ ರಾಘವಂ**
**ನನಾಮ ಬಾಷ್ಪಾಕುಲಲೋಚನಾನನಃ ॥ (8–228)**

ಈ ವಾರ್ತೆಯನ್ನು ಕೇಳುತ್ತಲೇ ಭರತನಿಗೆ ಭಾರೀ ಆನಂದ ಉಂಟಾಯಿತು. ಭರತನು ಹನುಮಂತದೇವರ ಜೊತೆಗೆ, ಪಟ್ಟಣಿಗರಿಂದ ಸಹಿತನಾಗಿ, ತಾಯಂದಿರಿಂದ ಕೂಡಿಕೊಂಡು ಶತ್ರುಘ್ನನೊಂದಿಗೆ ಶ್ರೀರಾಮದೇವರನ್ನು ಇದಿರುಗೊಂಡನು. ಆನಂದಾಶ್ರುಗಳಿಂದ ಕಣ್ಣು ತುಂಬಿದವನಾಗಿ, ಅರಳಿದ ಮುಖವುಳ್ಳವನಾಗಿ ಶ್ರೀರಾಮದೇವರಿಗೆ ನಮಸ್ಕರಿಸಿದನು.

**ಪುರೀಂ ಪ್ರವಿಶ್ಯ ಮುನಿಭಿಃ ಸಾಮ್ರಾಜ್ಯೇಚಾಭಿಷೇಚಿತಃ ॥ 8–230**

ಉಕ್ತಿಯಂತೆ ಶ್ರೀರಾಮದೇವರು ಅಯೋಧ್ಯಾ ಪಟ್ಟಣವನ್ನು ಪ್ರವೇಶಿಸಿದರು ಮತ್ತು ಮುನಿಗಳಿಂದ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಹೊಂದಿದರು. ಹಾಗೆಯೇ ಭರತನನ್ನು ಸಂತೋಷಪಡಿಸಿದರು.

ಇಂಥ ರಾಮರೂಪೀ ನಾರಾಯಣನೇ ನಿನಗೆ ನಮಸ್ಕಾರವು.

ಶ್ರೀರಾಮದೇವರು ಮರಳಿ ಪರಂಧಾಮಕ್ಕೆ ಬರಬೇಕೆಂದು ಪ್ರಾರ್ಥಿಸಿ, ಆ ಪ್ರಾರ್ಥನಾ ಕಾರ್ಯಕ್ಕಾಗಿ ರುದ್ರದೇವರನ್ನು ಕಳಿಸಿಕೊಟ್ಟರು. ಶ್ರೀರಾಮದೇವರ ಸನ್ನಿಧಿಗೆ ಬಂದ ರುದ್ರದೇವರು ಅವರನ್ನು ಪ್ರಾರ್ಥಿಸಿದರು.

**ರುದ್ರಂ ಸ್ವಲೋಕಗಮನಾಯ ರಘೂತ್ತಮಸ್ಯ**
**ಸಂಪ್ರಾರ್ಥನೇ ಸ ಚ ಸಮೇತ್ಯ ವಿಭುಂ ಯಯಾಚೇ ॥ (9–45)**



ದೇವತೆಗಳ ಪ್ರಾರ್ಥನೆಯಂತೆ ಶ್ರೀರಾಮದೇವರು ಪರಂಧಾಮಕ್ಕೆ ತೆರಳಲು ನಿಶ್ಚಯಿಸಿ ಮಗನಾದ ಕುಶನನ್ನು ರಾಜನನ್ನಾಗಿಸಿ, ಲವನನ್ನು ಯುವರಾಜನನ್ನಾಗಿಸಿ ಹೊರಟರು.

ರಘುಶ್ರೇಷ್ಠರಾದ ಶ್ರೀರಾಮದೇವರು ತಮ್ಮ ಒಂದು ರೂಪದಿಂದ ಸ್ವರ್ಗ ಲೋಕದಲ್ಲಿ ಸುರಪೂಜಿತನಾಗಿ ನೆಲೆಸಿದರು. ಎರಡನೆಯ ರೂಪದಿಂದ ಸತ್ಯಲೋಕದಲ್ಲಿ ನೆಲೆಸಿದರು. ಮೂರನೆಯ ರೂಪದಿಂದ ತಮ್ಮ ನೆಲೆಯಾದ ಶ್ವೇತದ್ವೀಪದಲ್ಲಿ ನೆಲೆಸಿ ಎಲ್ಲ ದೇವತೆಗಳ ಸಮೂಹಕ್ಕೆ ಸಂತೋಷವನ್ನುಂಟುಮಾಡಿದರು.

**ಉರಿನುಂಗಿ ಗಿರಿನೆಗಹಿ ವ್ರಜವ ಪಾಲನೆ ಮಾಡ್ದೆ**
**ನಾರಾಯಣಾಯ ನಮೋ ನಾರಾಯಣ**
**ಉರಗನೆಳೆತಂದವನ ರಾಣಿಯರ ಸ್ತುತಿಗೊಲಿದೆ**
**ನಾರಾಯಣಾಯ ನಮೋ ನಾರಾಯಣ ॥12॥**

ಈ ಪ್ರಸ್ತುತ ಪದ್ಯದಿಂದ ಶ್ರೀಕೃಷ್ಣಾವತಾರದಲ್ಲಿ ಮಾಡಿದ ಮಹಿಮೆಗಳನ್ನು ವರ್ಣಿಸಿ ಅಂತಹ ನಾರಾಯಣನೇ ನಿನಗೆ ನಮಸ್ಕಾರ ಎನ್ನುತ್ತಿದ್ದಾರೆ ಶ್ರೀದಾಸರು.

ಹಿಂದೆ ಶ್ರೀಕೃಷ್ಣ ಕಾಡ್ಗಿಚ್ಚನ್ನು ನುಂಗಿದ. ಇಂದ್ರದೇವರು ಸತತವಾಗಿ ಏಳು ದಿನ ಮಳೆ ಸುರಿಸಲು ಶ್ರೀಕೃಷ್ಣ ಗೋವರ್ಧನಗಿರಿಯನ್ನು ಎತ್ತಿಹಿಡಿದು ಗೋಕುಲವನ್ನು ರಕ್ಷಿಸಿದನು. ಮುಂದೆ ಕಾಲಿಯನು ಯಮುನೆಯ ನೀರನ್ನು ವಿಷಪ್ರಾಯವಾಗಿ ಮಾಡಿರಲು ಶ್ರೀಕೃಷ್ಣನು ಎಲ್ಲ ಗೋಪಾಲಕರೊಡನೆ ಯಮುನೆಗೆ ಬಂದು ಕಾಲಿಯನ ಹೆಡೆಯ ಮೇಲೆ ಕುಣಿಯುತ್ತಿರಲು ಅವನು ರಕ್ತಕಾರಲು ಪ್ರಾರಂಭ ಮಾಡಿದ. ಆಗ ಅವನ ಪತ್ನಿಯರು ಬಂದು ಶ್ರೀಕೃಷ್ಣನನ್ನು ಕುರಿತು ಪತಿಭಿಕ್ಷೆ ನೀಡಬೇಕೆಂದು ಕೇಳಿಕೊಂಡಾಗ ಅವನನ್ನು ಶಿಕ್ಷಿಸಿ, ಕೊಲ್ಲದೇ, ರಮಣಕ ದ್ವೀಪಕ್ಕೆ ಕಳಿಸಿಕೊಟ್ಟನು. ಇಂಥ ಶ್ರೀಕೃಷ್ಣರೂಪೀ ನಾರಾಯಣನೇ ನಿನಗೆ ನಮಸ್ಕಾರ.

**ವಿವರಣೆ –**

ಶ್ರೀಕೃಷ್ಣ ಉರಿನುಂಗಿದ ಪ್ರಸಂಗ ಹೀಗಿದೆ –

ಒಮ್ಮೆ ಶ್ರೀಕೃಷ್ಣನ ಜೊತೆ ಗೋಪಾಲಕರೆಲ್ಲರೂ ವ್ರಜಕ್ಕೆ ಹೋಗದೇ ರಾತ್ರಿಯಲ್ಲಿ ಯಮುನಾ ತೀರದಲ್ಲಿ ಮಲಗಿದ್ದರು. ಅದು ಬೇಸಿಗೆಯ ಕಾಲವಾಗಿತ್ತು. ಗಿಡಮರಗಳೆಲ್ಲವೂ ಒಣಗಿದ್ದವು. ಅರ್ಧರಾತ್ರಿಯಾದಾಗ ಅವಕ್ಕೆ ಬೆಂಕಿ ಹತ್ತಿಕೊಂಡಿತು. ಆ ಬೆಂಕಿಯು ಅಲ್ಲಿ ಮಲಗಿರುವ ವ್ರಜವಾಸಿಗಳನ್ನು ಸುತ್ತುವರೆದು ಅವರನ್ನು ಸುಡತೊಡಗಿತು. ಬೆಂಕಿಯ ಶಾಖವು ಅವರಿಗೆ – ತಗಲುತ್ತಲೇ ಎಲ್ಲರೂ ಎದ್ದು ಕೃಷ್ಣ! ಮುಕುಂದ! ಈ ಭಯಂಕರವಾದ ಕಾಡ್ಗಿಚ್ಚು ನಿಮ್ಮ ಸ್ವಜನ ಸಂಬಂಧಿಗಳಾದ ನಮ್ಮನ್ನು ಸುಡಲು ಬರುತ್ತಿದೆ ಇದರಿಂದ ನಮ್ಮನ್ನು ರಕ್ಷಿಸಿರಿ ಎಂದು ಬೇಡಿಕೊಂಡರು. ಆಗ ಶ್ರೀಕೃಷ್ಣನು –

**ಇತ್ಥಂ ಸ್ವಜನ ವೈಕ್ಲವ್ಯಂ ನಿರೀಕ್ಷ್ಯ ಜಗದೀಶ್ವರಃ ।**
**ತಮಗ್ನಿಮಪಿಬತ್ತೀವ್ರಮನಂತೋऽನಂತ ಶಕ್ತಿಧೃಕ್ ॥ (10–17–25)**



ಎಂಬಂತೆ ಜಗದೀಶ್ವರನಾದ ಅವನು ಸ್ವಜನರು ದುಃಖಿತರಾಗಿರುವುದನ್ನು ನೋಡಿ ಆ ಭಯಂಕರ ಕಾಡ್ಗಿಚ್ಚನ್ನು ಕುಡಿದು ಬಿಟ್ಟನು.

**ಶ್ರೀಕೃಷ್ಣ ಗಿರಿನೆಗಹಿ ವ್ರಜವ ಪಾಲನ ಮಾಡಿದ ಪ್ರಸಂಗ ಹೀಗಿದೆ –**

ಗೋಪಾಲಕರೆಲ್ಲರೂ ಇಂದ್ರನ ಪ್ರೀತಿಯನ್ನು ಉದ್ದೇಶಿಸಿ ಪ್ರತಿ ವರುಷವೂ “ಗೋವರ್ಧನ” ಪೂಜೆಯನ್ನು ನಡೆಸುತ್ತಿದ್ದರು. ಒಮ್ಮೆ ಶ್ರೀಕೃಷ್ಣನು ದೇವೇಂದ್ರನ ಪೂಜೆಯ ಉದ್ಯೋಗವನ್ನು ನೋಡಿ ಅವರನ್ನು ತನ್ನ ಪೂಜೆಯಲ್ಲಿ ಪ್ರವೃತ್ತರಾಗುವಂತೆ ಮಾಡಿ, ಅತಿ ದೊಡ್ಡ ರೂಪವನ್ನು ಧರಿಸಿ ಅನೇಕ ಪ್ರಕಾರದ ಅನ್ನಾದಿ ಬಲಿಗಳನ್ನು ತಾನೇ ಸ್ವೀಕರಿಸಿದನು.

ಶ್ರೀಕೃಷ್ಣನ ಮಾತಿನಂತೆ ಗೋಪಾಲಕರು ಗೋವರ್ಧನ ಪೂಜೆಯನ್ನು ಶ್ರೀಕೃಷ್ಣನ ಉದ್ದೇಶ್ಯವಾಗಿ ಮಾಡಿರುವುದನ್ನು ನೋಡಿ ಕುಪಿತನಾದ ಇಂದ್ರನು ಹೀಗೆಂದನು –

**ವಾಚಾಲಂ ಮಾನಿನಂ ಮತ್ತಂ ಅಜ್ಞಂ ಪಂಡಿತಮಾನಿನಂ ।**
**ಕೃಷ್ಣಂ ಮರ್ತ್ಯಮುಪಾಶ್ರಿತ್ಯ ಗೋಪಾ ಮೇ ಚಕ್ರುರಪ್ರಿಯಂ ॥**

**(ಶ್ರೀಮದ್ ಭಾಗವತ – 10–23–5)**

ಈ ಗೋಪಾಲಕರು ಮಾತುಗಾರನಾದ, ತಿಳಿವಳಿಕೆ ಇಲ್ಲದ ಪಂಡಿತನಂತೆ ತೋರುವ ಮಾನವನಾದ ಕೃಷ್ಣನನ್ನು ಆಶ್ರಯಿಸಿ ನನಗೆ ಅಪ್ರಿಯವನ್ನುಂಟು ಮಾಡಿದ್ದಾರೆ. ಹೀಗೆ ಹೇಳುತ್ತ ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನ ಅವತಾರವೆಂಬುದನ್ನು ಮರೆತು ಸಿಟ್ಟಿನಿಂದ ಆ ಗೋಕುಲವನ್ನು ನಾಶಮಾಡುವ ಇಚ್ಛೆಯಿಂದ ಪ್ರಲಯಕಾಲೀನ ಮೇಘಗಳಿಗೆ ಆನೆಯ ಸೊಂಡಿಲಿನಂತೆ ಇರುವ ದೊಡ್ಡದಾದ ಹನಿಗಳಿಂದ ಮಳೆ ಸುರಿಸಲು ಆಜ್ಞೆ ಮಾಡಿದನು.

ದೊಡ್ಡದಾದ ಜಲಧಾರೆಗಳಿಂದ ಪೀಡಿತರಾದ ಗೋಪಾಲಕರು ಶ್ರೀಕೃಷ್ಣನನ್ನು ರಕ್ಷಣೆಗಾಗಿ ಪ್ರಾರ್ಥಿಸಲು ಆ ಗೋವರ್ಧನ ಪರ್ವತವನ್ನು –

**ಕರೇಣೈಕೇನ ಲೀಲಯಾ ಪುಷ್ಕರಂ ಗಜರಾಡಿವ ಬಿಭ್ರತ್** ॥ ಉಕ್ತಿಯಂತೆ ತನ್ನ ಒಂದೇ ಕೈಯಿಂದ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು ಆ ಗೋಪಾಲಕರನ್ನು ಪಾಲನೆ ಮಾಡಿದನು. ಅವರನ್ನು ಸಂತೋಷಗೊಳಿಸಿದನು.

**ಉರಗನೆಳೆತಂದವನ ರಾಣಿಯರ ಸ್ತುತಿಗೊಲಿದ ಪ್ರಸಂಗ ಹೀಗಿದೆ –**

ಯಮುನಾನದಿಯ ನೀರಿನಲ್ಲಿ ಕಾಲಿಯ ಸರ್ಪವು ವಾಸಿಸುತ್ತಿದ್ದ ಕಾರಣ ಆ ನೀರು ಗೋಪಾಲಕರಿಗೆ, ಗೋವುಗಳಿಗೆ ಕುಡಿಯಲು ಅಸಾಧ್ಯವಾಗಿತ್ತು. ಅಕಸ್ಮಾತ್ತಾಗಿ ನೀರನ್ನು ಕುಡಿದ ಗೋವುಗಳು ಅಸುನೀಗಿದ್ದವು. ಇಂಥ ಆಪತ್ತಿನಿಂದ ಪಾರು ಮಾಡಲು ಗರುಡವಾಹನನಾದ ಶ್ರೀ ಕೃಷ್ಣನು ಗೋಪಾಲಕರಿಂದೊಡಗೂಡಿ ಯಮುನೆಗೆ ಬಂದು ಕಾಲಿಯ ಮಡುವಿನ ಹತ್ತಿರವಿದ್ದ ಕಡಾಲಮರದ ಮೇಲಿಂದ ಆ ನೀರಲ್ಲಿ ಧುಮುಕಿದನು. ನೀರಲ್ಲಿ ಬಿದ್ದು ಕಲಕುತ್ತಿದ್ದ ಪುರುಷೋತ್ತಮನಾದ ಶ್ರೀಕೃಷ್ಣನನ್ನು ಕಾಲಿಯನು ಕಚ್ಚಬೇಕೆಂದು ಹಿಡಿದನು. ಆಗ ಶ್ರೀಕೃಷ್ಣನು ಕಾಲಿಯ ಸರ್ಪದ ಹೆಡೆಯನ್ನು ತುಳಿದು ಮರ್ದಿಸಿ ಬಾಲವನ್ನು ಅಭಯ ಹಸ್ತದಿಂದ ಎತ್ತಿ ಹಿಡಿದು ಕುಣಿಯತೊಡಗಿದನು.



**ಅನೀನದತ್ ಪದ್ಮಭವೋ ಮೃದಂಗಂ ಜಗೌ ಹನೂಮಾನ್ ಜಗತಾಮಧೀಶಮ್ ।**
**ಅದರ್ಶಯತ್ ತಾಲಗತಿಃಕಪರ್ದೀ ನನರ್ತಗೋಪಾಲಕಬಾಲಮೌಲಿಃ ॥**

**ಶ್ರೀರುಕ್ಮಿಣೀಶವಿಜಯ 4–68**

ಶ್ರೀಕೃಷ್ಣನು ಕುಣಿಯತೊಡಗಿದಾಗ ಪದ್ಮಭವನಾದ ಚತುರ್ಮುಖನು ಮೃದಂಗವನ್ನು ಬಾರಿಸಿದನು. ಹನುಮಂತನು ರಾಗವಾಗಿ ಹಾಡಿದನು. ಶಿವನು ರಾಗಾನುಗುಣವಾಗಿ ತಾಳತಟ್ಟಿದನು.

ಕುಣಿಯುವ ಶ್ರೀಕೃಷ್ಣನ ತಾಂಡವ ನೃತ್ಯದಿಂದಾಗಿ ಕಾಲಿಯನ ಹೆಡೆಗಳು ಛಿನ್ನ ಭಿನ್ನವಾದವು ಬಾಯಿಂದ ರಕ್ತದ ಕೋಡಿಯೇ ಹರಿಯಿತು. ಇದನ್ನು ನೋಡಿದ ಕಾಲಿಯನ ಪತ್ನಿಯರು ಶ್ರೀಕೃಷ್ಣನನ್ನು ಕುರಿತು ಸ್ತೋತ್ರಮಾಡಿ ತಮಗೆ ಪತಿಭಿಕ್ಷೆ ನೀಡಬೇಕೆಂದು ಕೇಳಿಕೊಂಡರು.

**ಅನುಗೃಹ್ಣೀಷ್ವ ಭಗವಾನ್ ಪ್ರಾಣಾಂಸ್ತ್ಯಜತಿ ಪನ್ನಗಃ ।**
**ಪ್ರೀಣಾಂ ನಃ ಸಾಧು ಶೋಚ್ಯಾನಾಂ ಪತಿಃ ಪ್ರಾಣಃ ಪ್ರದೀಯತಾಮ್** ॥ (10–16–52)

ಆಗ ಕರುಣಾಸಮುದ್ರನಾದ ಶ್ರೀಕೃಷ್ಣನು ಅವರ ಸ್ತೋತ್ರಕ್ಕೆ ಮೆಚ್ಚಿ ಪ್ರಾಣಭಿಕ್ಷೆ ನೀಡಿ ಅವರನ್ನು ಸಂತೋಷಗೊಳಿಸಿ ಕಾಲಿಯನನ್ನು ರಮಣಕದ್ವೀಪಕ್ಕೆ ಕಳಿಸಿಕೊಟ್ಟನು.

**ಕ್ರತುನಾರಿಯರನ್ನ ಸವಿದುಂಡು ಸುಖವಿತ್ತೆ**
**ನಾರಾಯಣಾಯ ನಮೋ ನಾರಾಯಣ**
**ಕ್ರತುಭೋಕ್ತೃ ಕ್ರತುಗಾತ್ರ ಕ್ರತುಪಾಲ ಕ್ರತುಶೀಲ**
**ನಾರಾಯಣಾಯ ನಮೋ ನಾರಾಯಣ ॥13॥**

ಶ್ರೀಕೃಷ್ಣನೊಮ್ಮೆ ಅಣ್ಣ ಬಲರಾಮ ಹಾಗೂ ಗೋಪಾಲಕರ ಜೊತೆ ಅಡವಿಗೆ ಹೋದಾಗ, ಗೋಪಾಲಕರು ಶ್ರೀಕೃಷ್ಣ! ನಾವು ಹಸಿದಿದ್ದೇವೆ. ನಮಗೆ ಅನ್ನ ನೀಡು ಎನ್ನಲು ಶ್ರೀಕೃಷ್ಣನು ಅವರನ್ನು ಕುರಿತು "ಇಲ್ಲೇ ಹತ್ತಿರದಲ್ಲಿ ಬ್ರಾಹ್ಮಣರು ಯಜ್ಞ ಮಾಡುತ್ತಿದ್ದಾರೆ. ಅವರ ಹತ್ತಿರಹೋಗಿ ಅಣ್ಣ ಬಲರಾಮನ ಹೆಸರು ಹೇಳಿ ಅನ್ನ ಕೊಡಿರೆಂದು ಕೇಳಿರಿ" ಎಂದನು. ಗೋಪಾಲಕರು ಆ ಬ್ರಾಹ್ಮಣರ ಹತ್ತಿರ ಹೋಗಿ ಕೇಳಲು ಅವರು ಅನ್ನ ಕೊಡಲು ನಿರಾಕರಿಸಿದರು. ಆಗ ಶ್ರೀಕೃಷ್ಣನು ತನ್ನ ಹೆಸರು ಹೇಳಿ ಆ ಬ್ರಾಹ್ಮಣ ಪತ್ನಿಯರ ಹತ್ತಿರ ಹೋಗಿ ಅನ್ನ ಯಾಚಿಸಿರಿ ಎಂದು ಗೋಪಾಲಕರಿಗೆ ಆಜ್ಞೆ ಮಾಡಿದನು. ಗೋಪಾಲಕರು ಬ್ರಾಹ್ಮಣ ಪತ್ನಿಯರ ಹತ್ತಿರ ಹೋಗಿ ಶ್ರೀಕೃಷ್ಣನ ಹೆಸರು ಹೇಳುವುದೊಂದೇ ತಡ, ಕೂಡಲೇ ಅವರು ನಾಲ್ಕು ತರಹದ ಅನ್ನವನ್ನು (ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ) ತಂದು ಶ್ರೀಕೃಷ್ಣನಿಗೆ ಅರ್ಪಿಸಿದರು. ಶ್ರೀಕೃಷ್ಣನು ಬ್ರಾಹ್ಮಣ ಪತ್ನಿಯರು ಭಕ್ತಿಯಿಂದಕೊಟ್ಟ ಅನ್ನವನ್ನು ಎಲ್ಲ ಗೋಪಾಲಕರಿಗೆ ಕೊಟ್ಟು ತಾನೂ ಸವಿದುಂಡು ಅವರನ್ನು ಅನುಗ್ರಹಿಸಿ ಸುಖ ನೀಡಿದನು. ಇಂಥ ಶ್ರೀಕೃಷ್ಣ ರೂಪೀ ನಾರಾಯಣನೇ ನಿನಗೆ ನಮಸ್ಕಾರವು.

ಶ್ರೀಕೃಷ್ಣನು ಯಜ್ಞ ಭೋಕ್ತೃವೂ, ಯಜ್ಞಗಾತ್ರನೂ, ಯಜ್ಞಪಾಲನೂ, ಯಜ್ಞಶೀಲನೂ ಆಗಿದ್ದಾನೆ. ಇಂಥ ಶ್ರೀಕೃಷ್ಣರೂಪೀ ನಾರಾಯಣನೇ ನಿನಗೆ ನಮಸ್ಕಾರವು.



**ವಿವರಣೆ –**

ಶ್ರೀಕೃಷ್ಣನೊಮ್ಮೆ ಅಣ್ಣ ಬಲರಾಮ ಹಾಗೂ ಗೋಪಾಲಕರ ಜೊತೆ ಹಸುಗಳನ್ನು ಮೇಯಿಸಲು ಹೋದಾಗ, ಗೋಪಾಲಕರು ಶ್ರೀಕೃಷ್ಣ ನಾವು ಹಸಿದಿದ್ದೇವೆ. ನಮಗೆ ಅನ್ನ ನೀಡಬೇಕೆಂದು ಕೇಳಲು ಶ್ರೀಕೃಷ್ಣನು ಅವರನ್ನು ಕುರಿತು ಪ್ರಿಯ ಮಿತ್ರರೇ! ಇಲ್ಲಿಂದ ಸ್ವಲ್ಪ ದೂರದಲ್ಲಿ ವೇದವಾದಿಗಳಾದ ಬ್ರಾಹ್ಮಣರು ಸ್ವರ್ಗ ಕಾಮನೆಯಿಂದ ಅಂಗೀರಸವೆಂಬ ಯಜ್ಞವನ್ನು ಮಾಡುತ್ತಿದ್ದಾರೆ. ನೀವು ಅಲ್ಲಿಗೆ ಹೋಗಿ ನನ್ನ, ಅಣ್ಣ ಬಲರಾಮನ ಹೆಸರು ಹೇಳಿ ಅನ್ನವನ್ನು ಕೇಳಿರಿ ಎಂದನು. ಗೋಪಾಲಕರು ಆ ಬ್ರಾಹ್ಮಣರ ಹತ್ತಿರ ಹೋಗಿ ಸ್ವಲ್ಪ ಅನ್ನ ನೀಡಬೇಕೆಂದು ಕೇಳಲು ಅವರು ಅನ್ನವನ್ನು ಕೊಡಲು ನಿರಾಕರಿಸಿಬಿಟ್ಟರು. ಆಗ ಶ್ರೀಕೃಷ್ಣನು ಗೋಪಾಲಕರೇ! "ನೀವು ಈ ಬಾರಿ ಆ ಬ್ರಾಹ್ಮಣ ಪತ್ನಿಯರ ಹತ್ತಿರ ಹೋಗಿ ಶ್ರೀಕೃಷ್ಣ ಬಲರಾಮರು ಇಲ್ಲಿಗೆ ಬಂದಿದ್ದಾರೆ ಅವರಿಗೆ ಅನ್ನ ಕೊಡಬೇಕೆಂದು ಹೇಳಿರಿ" ಎಂದಾಗ ಅವರು ಶ್ರೀಕೃಷ್ಣನ ಅಪ್ಪಣೆಯಂತೆ ಆ ಬ್ರಾಹ್ಮಣ ಪತ್ನಿಯರ ಬಳಿ ಹೋಗಿ ಅನ್ನವನ್ನು ಯಾಚಿಸಿದರು. ಶ್ರೀಕೃಷ್ಣನ ಹೆಸರು ಹೇಳುವುದೊಂದೇ ತಡ, ಅವರು ತಾವು ತಯಾರಿಸಿ ಇಟ್ಟಿದ್ದ ಭಕ್ಷ್ಯ, ಭೋಜ್ಯ, ಲೇಹ್ಯ ಪೇಯಗಳೆಂಬ ನಾಲ್ಕು ವಿಧವಾದ ಅನ್ನವನ್ನು ತೆಗೆದುಕೊಂಡು ಶ್ರೀಕೃಷ್ಣನ ಬಳಿಗೆ, ನದಿಗಳು ಸಮುದ್ರವನ್ನು ಕುರಿತು ಬರುವಂತೆ ಬಂದುಬಿಟ್ಟರು.

**ಚತುರ್ವಿಧಂ ಬಹುಗುಣಮನ್ನಮಾದಾಯ ಭಾಜನೈಃ ।**
**ಅಭಿಸಸ್ರುಃ ಪ್ರಿಯಂ ಸರ್ವಾಃ ಸಮುದ್ರಮಿವ ನಿಮ್ನಗಾಃ ॥** (10–23–19)

ಅವರು ಅರ್ಪಿಸಿದ ಆ ನಾಲ್ಕು ತರಹದ ಅನ್ನವನ್ನು ಎಲ್ಲ ಗೋಪಾಲಕರಿಗೆ ಕೊಟ್ಟು ತಾನೂ ಸವಿದುಂಡ ಶ್ರೀಕೃಷ್ಣ ಆ ಬ್ರಾಹ್ಮಣ ಪತ್ನಿಯರನ್ನು ಅನುಗ್ರಹಿಸಿ ಸುಖ ನೀಡಿದನು. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

ಆ ನಾರಾಯಣನು ಕ್ರತುಭೋಕ್ತೃ–ಕ್ರತುಗಾತ್ರ– ಕ್ರತುಪಾಲ – ಕ್ರತುಶೀಲನಾಗಿದ್ದಾನೆ –
**1. ಕ್ರತುಭೋಕ್ತೃ** – ಯಜ್ಞಭೋಕ್ತೃವೆನಿಸಿದ್ದಾನೆ –

– **"ಭೋಕ್ತಾರಂ ಯಜ್ಞತಪಸಾಂ"** – (5–29) ಎಂಬುದಾಗಿ ಶ್ರೀಕೃಷ್ಣಗೀತೆಯಲ್ಲಿ ಹೇಳಿದ ಮಾತನ್ನು ಇಲ್ಲಿ ಸ್ಮರಿಸಬಹುದು.

**–"ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ"– ಗೀತಾ** (9–24) ಇಲ್ಲಿ ಹೇಳಿದ್ದನ್ನು ಸ್ಮರಿಸಬಹುದು.

**– ಭುಂಕ್ತೇ ಯಜ್ಞಭುಜೋ ದೇವಾನಾವಿಶ್ಯ ಪುರುಷೋತ್ತಮಃ ॥ ಭಾಗವತ ತಾತ್ಪರ್ಯನಿರ್ಣಯ** (4–8–27)

ಯಜ್ಞವನ್ನು ಅಪ್ರಧಾನವಾಗಿ ಭೋಗಿಸುವ ದೇವತೆಗಳಲ್ಲಿ ಆವೇಶಗೊಂಡು ಭಗವಂತನೇ ಮುಖ್ಯವಾಗಿ ಆ ಯಜ್ಞಗಳನ್ನು ಭೋಗಿಸುತ್ತಾನೆ.



– **"ಯಜ್ಞಭುಕ್"** ಎಂಬುದಾಗಿ ಶ್ರೀವಿಷ್ಣುಸಹಸ್ರನಾಮದಲ್ಲಿ – ಸಂಬೋಧಿಸಲಾಗಿದೆ.

**2. ಕ್ರತುಗಾತ್ರ –** ನಾರಾಯಣನು ಯಜ್ಞವೇ ಶರೀರವಾಗಿ ಉಳ್ಳವನಾಗಿದ್ದಾನೆ.

– "ಕ್ರತುವಶ್ಚ ಹರೇಸ್ತನೂಃ" ಶ್ರೀಮದ್ ಭಾಗವತ (10–4–41)

– ಯಜ್ಞಗಳು ನಾರಾಯಣನ ಶರೀರವಾಗಿವೆ.

– "ಯಜ್ಞಾಂಗಃ" ಎಂಬುದಾಗಿ ಶ್ರೀವಿಷ್ಣುಸಹಸ್ರನಾಮದಲ್ಲಿ ಸಂಬೋಧಿಸಲಾಗಿದೆ. (ಅಂಗಂ – ಶರೀರಂ)

**3. ಕ್ರತುಪಾಲ –** ನಾರಾಯಣನು ಯಜ್ಞ ರಕ್ಷಕನಾಗಿದ್ದಾನೆ.

– "ಯಜ್ಞಪತಿಃ" ಎಂಬುದಾಗಿ ಶ್ರೀವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಸಂಬೋಧಿಸಲಾಗಿದೆ.

**4. ಕ್ರತುಶೀಲ –** ನಾರಾಯಣನು ಯಜ್ಞವೇ ಸ್ವಭಾವವುಳ್ಳವನಾಗಿದ್ದಾನೆ.

– "ಯಜ್ಞೀ" ಎಂಬುದಾಗಿ ಶ್ರೀವಿಷ್ಣುಸಹಸ್ರನಾಮದಲ್ಲಿ ಸಂಬೋಧಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

– ಯಜ್ಞ ನಿರ್ವಾಹಕನಾಗಿ, ಕರ್ತೃವಾಗಿ, ಭೋಕ್ತೃನಾಗಿ, ಅಧಿಪತಿಯಾಗಿ ಯಜ್ಞಗಳನ್ನು ಹೊಂದಿರುವವನಾದ್ದರಿಂದ ಅವನಿಗೆ "ಕ್ರತುಶೀಲ" ನಾಮ ಸಾರ್ಥಕವೇ.

**ಗೋಪಸ್ತ್ರೀಯರ ಕುಚದಿ ನ್ಯಸ್ತ ಚರಣಾಬ್ಜಯುಗ**
**ನಾರಾಯಣಾಯ ನಮೋ ನಾರಾಯಣ ।**
**ಗೋಪೀಜನಜಾರ ನವನೀತ ದಧಿಚೋರ ।**
**ನಾರಾಯಣಾಯ ನಮೋ ನಾರಾಯಣ ॥14॥**

ಶ್ರೀಕೃಷ್ಣಾವತಾರದಲ್ಲಿ ಭಗವಂತ ಗೋಪಿಕಾಸ್ತ್ರೀಯರ ಜೊತೆಯಲ್ಲಿ ವಿಹಾರ ಮಾಡುತ್ತಿದ್ದ. ಒಮ್ಮೆ ಶ್ರೀಕೃಷ್ಣ ಆಗೋಪಿಕಾಸ್ತ್ರೀಯರ ಸ್ತನಗಳಲ್ಲಿ ತನ್ನ ಎರಡೂ ಪಾದಗಳನ್ನು ಇಟ್ಟಿದ್ದನಂತೆ ಅಂಥ ನಾರಾಯಣನೇ ನಿನಗೆ ನಮಸ್ಕಾರವು. ಶ್ರೀಕೃಷ್ಣ ಅನೇಕ ಗೋಪಿಕಾಸ್ತ್ರೀಯರ ಮನೆಗಳಿಗೆ ಹೋಗಿ ಬೆಣ್ಣೆ ಮೊಸರುಗಳನ್ನು ಕದ್ದು "ನವನೀತ ದಧಿಚೋರ" ಎಂದು ಪ್ರಸಿದ್ಧನಾದ. ಹಾಗೆಯೇ ಗೋಪಿಕಾಸ್ತ್ರೀಯರ ಜೊತೆ ವಿಹಾರಮಾಡುತ್ತ "ಗೋಪೀಜನಜಾರ" ಎಂಬ ಬಿರುದು ಗಳಿಸಿದ್ದ.

**ವಿವರಣೆ – "ಗೋಪಸ್ತ್ರೀಯರ ಕುಚದಿ ನ್ಯಸ್ತ ಚರಣಾಬ್ಜಯುಗ"** ಶ್ರೀಕೃಷ್ಣನಾಗಿದ್ದಾನೆ.

ಆ ಪ್ರಸಂಗ ಹೀಗಿದೆ –

ಶ್ರೀಕೃಷ್ಣನು ಗೋಪಿಕಾಸ್ತ್ರೀಯರ ಜೊತೆಯಲ್ಲಿ "ರಾಸಕ್ರೀಡೆ" ಮಾಡಬೇಕೆಂದು ಬಯಸಿ ತಾನು ಸುಮಧುರವಾದ ವೇಣುಗಾನವನ್ನು ಮಾಡತೊಡಗಿದನು. ಆಗ ಎಲ್ಲ ಗೋಪಿಕಾಸ್ತ್ರೀಯರು ಗಾನ ಮೋಹಿತರಾಗಿ ತಮ್ಮ ಮನೆ ಕೆಲಸಗಳನ್ನು ಅಲ್ಲಿಯೇ ಬಿಟ್ಟು ಶ್ರೀಕೃಷ್ಣನ ಬಳಿಗೆ ಓಡಿ ಬಂದರು. ಶ್ರೀಕೃಷ್ಣ ಅವರಿಗೆ ಸ್ವಾಗತವನ್ನು ಕೋರಿ ನೀವು ಇಲ್ಲಿಗೆ ಬಂದ ಕಾರಣವೇನು? ಇದು ಭಯಾನಕ ರಾತ್ರಿಯಾಗಿದೆ. ನೀವೆಲ್ಲರೂ ಈಗಲೇ ಹಿಂತಿರುಗಿ ನಿಮ್ಮ ಮನೆಗಳಿಗೆ



ಹೋಗಿರಿ. ನಿಮ್ಮನ್ನು ಕಾಣದೇ ತಂದೆ, ತಾಯಿ, ಸಹೋದರರು, ಪತಿ, ಪುತ್ರರು ನಿಮ್ಮನ್ನು ಹುಡುಕುತ್ತಿರಬಹುದು. ಅವರಿಗೆ ಭಯವುಂಟಾಗುವಂತೆ ವರ್ತಿಸುವುದು ನಿಮಗೆ ಯೋಗ್ಯವಲ್ಲ. ನೀವು ಇಲ್ಲಿಗೆ ಬಂದು ಚಂದ್ರನ ಬೆಳದಿಂಗಳಿನಿಂದ ಪ್ರಕಾಶಮಾನವಾಗಿ ಕಾಣುತ್ತಿರುವ ವೃಂದಾವನವನ್ನು ನೋಡಿದಿರಿ. ಈ ವೃಂದಾವನದ ವನಸಿರಿಯನ್ನು ನೋಡಿ ಆನಂದಿಸಿದಿರಿ. ಸತೀ ಧರ್ಮವನ್ನು ಅನುಸರಿಸಿ ಆಚರಿಸಲು ಮನೆಗೆ ಹೋಗಿರಿ ಎಂದನು.

ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ಗೋಪಿಕಾಸ್ತ್ರೀಯರು ದುಃಖಿತರಾದರು. ಮತ್ತು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾರೆ – ಪಾಪಹರನಾದ ಪರಮೇಶ್ವರನೇ! ನಿನ್ನ ಸೇವೆ ಮಾಡಬೇಕೆಂಬ ಆಸೆಯಿಂದ ನಾವು ಮನೆ, ಪತಿ, ಸುತರನ್ನು, ಬಂಧುಗಳನ್ನು ಬಿಟ್ಟು ಬಂದಿದ್ದೇವೆ. ಹೀಗೆ ಆ ಎಲ್ಲ ಗೋಪಿಕಾಸ್ತ್ರೀಯರು ಪ್ರಾರ್ಥಿಸಲು ಶ್ರೀಕೃಷ್ಣನು ಅವರ ಜೊತೆಗೆ ರಾಸಕ್ರೀಡೆಯನ್ನು ಪ್ರಾರಂಭಿಸಿದನು. ಸ್ವಲ್ಪಹೊತ್ತು ಹೀಗೆ ರಾಸಕ್ರೀಡೆ ಆಡುತ್ತಿರುವಾಗ ಗೋಪಿಕಾಸ್ತ್ರೀಯರಿಗೆ ತಮ್ಮ ಸೌಂದರ್ಯದ ಕುರಿತಂತೆ ಮದವೇ ಆವರಿಸಿತು. ತಾವೇ ಅಧಿಕರೆಂಬ ಗರ್ವವು ಬಂದು ಹೋಯಿತು. ಅವರ ಮದವನ್ನು ಹೋಗಲಾಡಿಸಲು ಶ್ರೀಕೃಷ್ಣನು ಇದ್ದಕ್ಕಿದ್ದಂತೆ ಅಂತರ್ಧಾನನಾದನು. ಅವನನ್ನು ಕಾಣದೇ ಗೋಪಿಕಾಸ್ತ್ರೀಯರು ವಿರಹವೇದನೆಯಿಂದ ಬಳಲಿದರು. ಗೋಪೀಕಾಸ್ತ್ರೀಯರು ವಿರಹವೇದನೆಯಿಂದ ಹಾಡತೊಡಗಿದರು. ಅದುವೇ ಗೋಪೀಗೀತೆ.

ಶ್ರೀಕೃಷ್ಣ ! ನೀನೊಬ್ಬನೇ ನಮ್ಮ ಸಮಸ್ತವಾದ ಪೀಡೆಗಳನ್ನು ಪರಿಹರಿಸಲು ಸಮರ್ಥನಾಗಿರುವೆ. ನಿನ್ನ ಚರಣಕಮಲಗಳು ಶರಣಾಗತ ಭಕ್ತರ ಸಮಸ್ತ ಅಭಿಲಾಷೆಗಳನ್ನು ಪೂರೈಸಲು ಸಮರ್ಥವಾಗಿವೆ. ಇಂಥ ಚರಣಕಮಲಗಳನ್ನು ನಮ್ಮ ಸ್ತನಗಳಲ್ಲಿ ಇರಿಸಿ ಅನುಗ್ರಹಿಸು.

**ಚರಣಪಂಕಜಂ ಶಂತಮಂ ಚ ತೇ**
**ರಮಣನಃ ಸ್ತನೇಷ್ವರ್ಪಯಾಧಿಹನ್** ॥ ಶ್ರೀಮದ್ ಭಾಗವತ (10–31–13)

ಇದನ್ನೇ ಶ್ರೀದಾಸರು "ಗೋಪಸ್ತ್ರೀಯರ ಕುಚದಿ ನ್ಯಸ್ತ ಚರಣಾಬ್ಜಯುಗ" ಎಂದಿರುವುದು ಗಮನಾರ್ಹವಾಗಿದೆ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

ಇನ್ನು ಶ್ರೀಕೃಷ್ಣ ಗೋಪೀಜನಜಾರ, ನವನೀತ ದಧಿಚೋರನಾಗಿದ್ದಾನೆ –

ಗೋಪೀಜನಜಾರ – ಗೋಪೀನಾಂ ಸಂಸಾರಬಂಧಂ ಜರಯತೀತಿ ಗೋಪೀಜನಜಾರಃ

– ಗೋಪಿಕಾಸ್ತ್ರೀಯರ ಸಂಸಾರ ಬಂಧನವನ್ನೇ ಕಳೆಯುತ್ತಾನಾದ್ದರಿಂದ ಶ್ರೀಕೃಷ್ಣನಿಗೆ "ಗೋಪೀಜನಜಾರ"ನೆಂದು ಹೆಸರು.

ಶ್ರೀವ್ಯಾಸರಾಜರು ಹೇಳುತ್ತಾರೆ –

**ಜಾರತ್ವವನು ಮಾಡಿದ ಪಾಪಗಳಿಗೆಲ್ಲ ಗೋಪೀಜನಜಾರನೆಂದರೆ ಸಾಲದೆ ।**
**ಚೋರತ್ವವನು ಮಾಡಿದ ಪಾಪಗಳಿಗೆಲ್ಲ ನವನೀತಚೋರನೆಂದರೆ ಸಾಲದೆ ।**
**ಕ್ರೂರತ್ವವನು ಮಾಡಿದ ಪಾಪಗಳಿಗೆಲ್ಲ ಮಾವನ ಕೊಂದವ ಎಂದರೆ ಸಾಲದೆ ।**



**ಪ್ರತಿದಿವಸದಲಿ ಮಾಡಿದ ಪಾಪಗಳಿಗೆಲ್ಲ ಪತಿತಪಾವನ ಎಂದರೆ ಸಾಲದೆ ।**
**ಇಂತಿಪ್ಪ ಮಹಿಮೆಯೊಳೊಂದನಾದರು ಒಮ್ಮೆ ।**
**ಸಂತತ ನೆನೆವರ ಸಲಹುವ ಸಿರಿಕೃಷ್ಣ ॥**

ಶ್ರೀಕೃಷ್ಣ **"ಗೋಪೀಜನಜಾರ"** ಎನ್ನುವಲ್ಲಿ ಅನೇಕ ಜನ ತಪ್ಪಾಗಿ ತಿಳಿಯುವದೂ ಉಂಟು. ಇದು ಸರಿಯಲ್ಲ. ಏಕೆಂದರೆ ಶ್ರೀಕೃಷ್ಣ ಗೋಪಿಕಾಸ್ತ್ರೀಯರನ್ನು ರಮಿಸಿದುದು ತನ್ನ ಸುಖಕ್ಕಾಗಿ ಅಲ್ಲ. ಭಕ್ತರಿಗೆ ಇಷ್ಟಾರ್ಥಗಳನ್ನು ಪೂರೈಸುವದರಲ್ಲಿ ಚಿಂತಾಮಣಿಯಂತಿರುವವ ನಾದ್ದರಿಂದ ಭಕ್ತರಿಗೆ ಸುಖಕೊಡುವುದಕ್ಕಾಗಿ ಅವರೊಡನೆ ರಮಿಸಿದ, ವಿಹರಿಸಿದ. ಚಿಂತಾಮಣಿಯಂತೆ ಶಕ್ತನಾದ್ದರಿಂದಲೇ ಒಬ್ಬನೇ ಶ್ರೀಕೃಷ್ಣ ಅಸಂಖ್ಯ ಸ್ತ್ರೀಯರನ್ನು ರಾಸಲೀಲೆ ಮಾಡಿ ತೃಪ್ತಿ ಪಡಿಸಿದ. ಆ ಸ್ತ್ರೀಯರು ಏಕಕಾಲದಲ್ಲಿ ಒಂದು ರೂಪದಿಂದ ತಮ್ಮ ತಮ್ಮ ಮನೆಗಳಲ್ಲಿಯೂ, ಇನ್ನೊಂದು ರೂಪದಿಂದ ರಾಸ ಮಂಡಲದಲ್ಲಿಯೂ ಇರುವಂತೆ ಮಾಡಿ ಯೋಗೀಶ್ವರನಾದ ಶ್ರೀಕೃಷ್ಣನು ರಮಿಸಿದ್ದರಿಂದ ಅವರಿಗೆ ಪತಿ, ಪುತ್ರಾದಿ ಬಾಂಧವರೊಡನೆ ವಿರಸವು ಉಂಟಾಗಲಿಲ್ಲ. ("ಆಪ್ತಕಾಮಸ್ಯ ಕಾ ಸ್ಪೃಹಾ" ಉಕ್ತಿಯನ್ನು ಇಲ್ಲಿ ಸ್ಮರಿಸಬಹುದು).

ಶ್ರೀಕೃಷ್ಣ ಬೆಣ್ಣೆ ಮೊಸರು ಕದ್ದು **"ನವನೀತ ದಧಿಚೋರ"** ಎನಿಸಿದ. ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀಮದಾಚಾರ್ಯರು ಹೇಳುತ್ತಾರೆ.

**ಅಕ್ರುದ್ಧ್ಯತಾಂ ಕೇಶವೋಽನುಗ್ರಹಾಯ**
**ಶುಭಂ ಸ್ವಯೋಗ್ಯಾದಧಿಕಂ ನಿಹಂತುಮ್ ।**
**ಸಕ್ರುದ್ಧ್ಯತಾಂ ನವನೀತಾದಿ ಮುಷ್ಣಂ**
**ಶ್ಚಚಾರ ದೇವೋ ನಿಜಸತ್ಸುಖಾಂಬುಧಿಃ ॥** (12–119)

ಕೋಪಿಸಿಕೊಳ್ಳದವರಿಗೆ ಅನುಗ್ರಹ ಮಾಡುವದಕ್ಕೂ, ಕೋಪಿಸಿಕೊಳ್ಳುವವರಿಗೆ ಅವರ ಅಧಿಕಪುಣ್ಯವನ್ನು ನಾಶಪಡಿಸುವದಕ್ಕೂ ಶ್ರೀಕೃಷ್ಣ ಬೆಣ್ಣೆ, ಮೊಸರು ಮೊದಲಾದವುಗಳನ್ನು ಕದಿಯುತ್ತ ಸಂಚರಿಸಿದ. ವಾಸ್ತವದಲ್ಲಿ ಅವನು ಸ್ವರೂಪಭೂತ ನಿರ್ದುಷ್ಟವಾದ ಆನಂದ ಸಾಗರನೇ ಆಗಿದ್ದಾನೆ.

ಶ್ರೀಕೃಷ್ಣ ನವನೀತ, ದಧಿ ಮೊದಲಾದವುಗಳನ್ನು ಕದಿಯುತ್ತಾನೆ –

**ಅಧಿಕ್ಷಿಪಂತ್ಯಾಂ ಸುಕೃತೇನ ಸಾಕಂ**
**ದಧೀನಿ ಧೀರಃ ಸ ಚುಚೋರ ಚೋರಃ ।**
**ಅಗಣ್ಯಪುಣ್ಯಾಖ್ಯಧನಾನಿ ದಾಯೀ**
**ಪ್ರದಾಯ ಸೋಽಚೂಚುರದಾನತಾಯಾಮ್ ॥** ಶ್ರೀರುಕ್ಮಿಣೀಶವಿಜಯ (3–36)

ದಾನಿಗಳಲ್ಲಿ ಅಗ್ರಗಣ್ಯನಾದ ಶ್ರೀಕೃಷ್ಣನು ಕಳ್ಳನಂತೆ ಆಚರಿಸುವವನಾಗಿ, ತನ್ನನ್ನು ಬೈಯುತ್ತಿರುವ ಗೋಪಿಕಾಸ್ತ್ರೀಯರ ಸುಕೃತದೊಂದಿಗೆ ಹಾಲು ಮೊಸರುಗಳನ್ನು ಕದ್ದನು. ತನ್ನನ್ನು ನಮಸ್ಕಾರ ಮಾಡಿದ ಅವರಿಗೆ ಅಸಂಖ್ಯಾತ ಪುಣ್ಯರಾಶಿಯನ್ನೇ ಕೊಟ್ಟು ಹಾಲು ಮೊಸರುಗಳನ್ನು ಕದ್ದನು.



ಶ್ರೀಕೃಷ್ಣ ಅಷ್ಟೋತ್ತರಶತನಾಮಸ್ತೋತ್ರದಲ್ಲಿ ಶ್ರೀಕೃಷ್ಣನನ್ನು –

**ನವನೀತವಿಲಿಪ್ತಾಂಗೋ ನವನೀತನಟೋಽನಘಃ ।**
**ನವನೀತ ನವಾಹಾರೋ ಮುಚುಕುಂದ ಪ್ರಸಾದಕಃ** ॥ – ಶ್ರೀ ಬ್ರಹ್ಮಾಂಡಪುರಾಣ

ಎಂಬುದಾಗಿ ಸ್ತೋತ್ರ ಮಾಡಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

**ವಂಶಗಾಯನ ಪ್ರಿಯ ವಿಧುಕುಲೋದ್ಭವಕೃಷ್ಣ**
**ನಾರಾಯಣಾಯ ನಮೋ ನಾರಾಯಣ ।**
**ವಂಶವರ್ಧಕ ಸುಜನ ವಂಶಮರ್ದಕ ಕುಜನ**
**ನಾರಾಯಣಾಯ ನಮೋ ನಾರಾಯಣ** ॥ **15** ॥

ಆ ಶ್ರೀಕೃಷ್ಣನು ವೇಣುಗಾಯನ ಪ್ರಿಯನು. ಚಂದ್ರಕುಲದಲ್ಲಿ ಉದ್ಭವಿಸಿ ಬಂದವನು. ಇಂಥ ಶ್ರೀಕೃಷ್ಣರೂಪೀ ನಾರಾಯಣನೇ ನಿನಗೆ ನಮಸ್ಕಾರವು. ಶ್ರೀಕೃಷ್ಣನು ಸಜ್ಜನರ ವಂಶವನ್ನು ವೃದ್ಧಿಪಡಿಸುವವನು. ದುಷ್ಟಜನರ ವಂಶವನ್ನು ನಾಶಪಡಿಸುವವನು. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

**ವಿವರಣೆ –**

ಶ್ರೀಕೃಷ್ಣನು ವಂಶಗಾಯನ ಪ್ರಿಯನು ಅಂದರೆ ವೇಣುಗಾಯನ ಪ್ರಿಯನಾಗಿದ್ದಾನೆ.

ಶ್ರೀಕೃಷ್ಣನ ವೇಣುಗಾನದ ವೈಶಿಷ್ಟ್ಯವನ್ನು ಗೋಪಿಕಾಸ್ತ್ರೀಯರೇ ಹೇಳುತ್ತಾರೆ.

**ಹಂತ ಚಿತ್ರಮಬಲಾಃ ಶೃಣುತೇದಂ**
**ಹಾರಹಾಸ ಉರಸಿ ಸ್ಥಿರವಿದ್ಯುತ್ ।**
**ನಂದಸೂನುರಯಮಾರ್ತಜನಾನಾಂ**
**ನರ್ಮದೋ ಯರ್ಹಿಕೂಜಿತವೇಣುಃ** ॥ ಶ್ರೀಮದ್ ಭಾಗವತ (10–35–4)

**ವೃಂದಶೋ ವ್ರಜವೃಷಾ ಮೃಗಗಾವೋ**
**ವೇಣುವಾದ್ಯಹೃತಚೇತಸ ಆರಾತ್ ।**
**ದಂತದಷ್ಟ ಕವಲಾ ಧೃತ ಕರ್ಣಾ**
**ನಿದ್ರಿತಾ ಲಿಖಿತ ಚಿತ್ರಮಿವಾಸನ್** ॥ ಶ್ರೀಮದ್‌ಭಾಗವತ (10–35–5)

ಮುತ್ತಿನ ಹಾರದಂತೆ ಶುಭ್ರವಾದ ನಗೆಯುಳ್ಳ, ವಕ್ಷಃಸ್ಥಳದಲ್ಲಿ ಮಿಂಚಿನಂತೆ ಹೊಳೆಯುವ ಲಕ್ಷ್ಮೀದೇವಿಯನ್ನು ಹೊಂದಿರುವ, ಆರ್ತರಾದ ಭಕ್ತರಿಗೆ ಸುಖವನ್ನುಂಟುಮಾಡುವ; ನಂದಗೋಪನ ಮಗನಾದ ಶ್ರೀಕೃಷ್ಣನು ಕೊಳಲನ್ನು ನುಡಿಸಲು ಆರಂಭಿಸಿದರೆ, ಗುಂಪು ಗುಂಪುಗಳಾಗಿ ಮೇಯುವ ವ್ರಜದ ಎತ್ತುಗಳು, ಮೃಗಗಳು, ಹಸುಗಳು, ಆ ವೇಣುಗಾನದಿಂದ ಮೈಮರೆತು ಮೇಯುವುದನ್ನು ನಿಲ್ಲಿಸಿ ಬಿಡುತ್ತವೆ. ಹಲ್ಲುಗಳಲ್ಲಿ ಕಚ್ಚಿಕೊಂಡ ಹುಲ್ಲನ್ನು ಅಗಿಯದೇ, ನುಂಗದೇ ಹಾಗೇ ನಿಲ್ಲುತ್ತವೆ. ತಮ್ಮ ಕಿವಿಗಳನ್ನು ನಿಮಿರಿಸಿಕೊಂಡು ಗಾನ



ಸುಧೆಯನ್ನು ಪಾನಮಾಡುತ್ತ ಚಿತ್ತಾರದಂತೆ ಸ್ಥಿರವಾಗಿ ನಿಂತು ಬಿಡುತ್ತವೆ. ಅವುಗಳ ಈ ಸ್ಥಿತಿಯು ಸ್ವಾಭಾವಿಕವೇ ಆಗಿದೆ. ಏಕೆಂದರೆ ಶ್ರೀಕೃಷ್ಣನ ವೇಣುಗಾನವು ಅವುಗಳ ಚಿತ್ತವನ್ನು ಅಪಹರಿಸುತ್ತದೆ.

**ವಿವಿಧಗೋಪಚರಣೇಷು ವಿದಗ್ಧೋ**
**ವೇಣುವಾದ್ಯ ಉರುಧಾ ನಿಜಶಿಕ್ಷಾಃ ।**
**ತವ ಸುತಃ ಸತಿ ಯದಾಧರಬಿಂಬೇ**
**ದತ್ತವೇಣುರನಯತ್ಸ್ವರ ಜಾತೀಃ ॥** ಶ್ರೀಮದ್‌ಭಾಗವತ (10–35–14)

**ಸವನಶಸ್ತದುಪಧಾರ್ಯ ಸುರೇಶಾಃ**
**ಶಕ್ರಶರ್ವಪರಮೇಷ್ಠಿ ಪುರೋಗಾಃ ।**
**ಕವಯ ಆನತಕಂಧರ ಚಿತ್ತಾಃ**
**ಕಶ್ಮಲಂ ಯಯುರನಿಶ್ಚಿತತತ್ತ್ವಾಃ ॥** ಶ್ರೀಮದ್ ಭಾಗವತ – (10–35–15)

ಇನ್ನೊಬ್ಬ ಗೋಪಿಕಾಸ್ತ್ರೀ ಹೇಳುತ್ತಾಳೆ – ಯಶೋದಾಮಾತೆಯೇ! ನಿನ್ನ ಮನಮೋಹಕನಾದ ಮಗನು ಗೋಪಬಾಲರೊಂದಿಗೆ ಆಟವಾಡುವುದರಲ್ಲಿ ಬಹಳ ನಿಪುಣನು. ಅವನು ಎಲ್ಲರ ಪ್ರೀತಿಗೆ ಪಾತ್ರನಾಗಿದ್ದು. ಅತ್ಯಂತ ಚತುರನೂ ಆಗಿದ್ದಾನೆ. ಅವನು ಕೊಳಲನ್ನು ನುಡಿಸುವುದನ್ನು ಯಾರಿಂದಲೂ ಕಲಿಯಲಿಲ್ಲ. ಅವನು ತೊಂಡೆಹಣ್ಣಿನಂತಿರುವ ಸುಂದರವಾದ ತನ್ನ ತುಟಿಯ ಮೇಲೆ ಕೊಳಲನ್ನು ಇಡುತ್ತಲೇ ಹಲವಾರು ರಾಗಗಳು ತಾವಾಗಿಯೇ ಪ್ರಕಟಗೊಳ್ಳುವವು. ಕರ್ಣಾನಂದಕರವಾದ ಆ ವೇಣುಗಾನವನ್ನು ಕೇಳಿದ ಇಂದ್ರ, ರುದ್ರ, ಬ್ರಹ್ಮರೇ ಮೊದಲಾದ ದೇವತೆಗಳು, ವಿದ್ವಾಂಸರು ಮುಖ ಕೆಳಗೆ ಮಾಡಿ ತಮ್ಮ ಮನಸ್ಸನ್ನು ಶ್ರೀಕೃಷ್ಣನಲ್ಲಿ ಇಡುತ್ತಾರೆ. ಇವರೆಲ್ಲರೂ ಎಷ್ಟೇ ಕೇಳಿದರೂ ಆನಂದ ಪಡುತ್ತಾರೆ ಹೊರತು ಶ್ರೀಕೃಷ್ಣನು ನುಡಿಸುವ ರಾಗವಾಗಲೀ, ರಾಗದ ಭೇದವಾಗಲೀ, ತಿಳಿಯುವದೇ ಇಲ್ಲ. ವೇಣುಗಾನದ ರಹಸ್ಯವನ್ನು ಇವರು ತಿಳಿಯಲಾಗದೇ, ವಿಮೋಹಿತರಾಗುತ್ತಾರೆ.

ಶ್ರೀಕೃಷ್ಣನು ವಿಧುಕುಲೋದ್ಭವ ಅಂದರೆ ಚಂದ್ರ ವಂಶದಲ್ಲಿ ಉದ್ಧವಿಸಿ ಬಂದವನಾಗಿದ್ದಾನೆ. ಈ ವಿಷಯವನ್ನು ಶ್ರೀ ಸುಮಧ್ವವಿಜಯ ಮಹಾಕಾವ್ಯದಲ್ಲಿ ತಿಳಿಸಿರುವ ಪರಿ ಹೀಗಿದೆ.

**ಕರುಣಾಕರಃ ಸ ವಸುದೇವಮೋದದೋ**
**ಭಗವಾನ್ ಪುರಾ ಹಿಮಕರಾನ್ವಯೇऽಭವತ್ ।**
**ಜಿತವಾನ್ ದಿಶೋ ದಶರಥೋऽಗ್ರ್ಯ ಸಂಪದೋ**
**ಜನಕೋ ಬಭೂವ ಭುವಿ ಯಸ್ಯ ವೈರಿಹಾ ॥** (8–19)

ಯಾರ ರಥವು ಹತ್ತು ದಿಕ್ಕುಗಳನ್ನು ಜಯಿಸಿ ಶತ್ರುಗಳನ್ನು ನಾಶಪಡಿಸಿ ಉತ್ತಮ ಸಂಪತ್ತುಗಳ ಪ್ರಾಪ್ತಿಗೆ ಕಾರಣವಾಯಿತೋ, ಅಂತಹ ಕರುಣಾಳುವಾದ ಭಗವಂತನು ದ್ವಾಪರಯುಗದ ಕೊನೆಯಲ್ಲಿ ಚಂದ್ರನ ವಂಶದಲ್ಲಿ ಅವತರಿಸಿ ವಸುದೇವನಿಗೆ ಸಂತೋಷ ವನ್ನುಂಟು ಮಾಡಿದನು.



ಶ್ರೀಕೃಷ್ಣನು ಸಜ್ಜನರ ವಂಶವರ್ಧಕನೂ, ದುಷ್ಟಜನರ ವಂಶಮರ್ದಕನೂ ಆಗಿದ್ದಾನೆ. ಶ್ರೀಕೃಷ್ಣನು ಶ್ರೀಭಗವದ್ಗೀತೆಯಲ್ಲಿ ಹೇಳಿದ ಮಾತನ್ನು ಇಲ್ಲಿ ಸ್ಮರಿಸಬಹುದು.

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥** 4–8

ಧರ್ಮಕ್ಕೆ ಹಾನಿಯು, ಅಧರ್ಮಕ್ಕೆ ವೃದ್ಧಿಯು ಉಂಟಾದಾಗ, ಪ್ರತಿಯುಗದಲ್ಲಿಯೂ – ಸಜ್ಜನರ ರಕ್ಷಣೆಗಾಗಿಯೂ, ದುಷ್ಟಜನರ ವಿನಾಶಕ್ಕಾಗಿಯೂ ನಾನು ಅವತರಿಸುತ್ತೇನೆ.

ಶ್ರೀದಾಮೋದರಸ್ತೋತ್ರದಲ್ಲಿ ಶ್ರೀಕೃಷ್ಣನನ್ನು ಕುರಿತು ಹೀಗೆ ಸ್ತೋತ್ರ ಮಾಡಿದ್ದಾರೆ.

**ಖಗವರವಾಹನ ಜಯ ಪೀತಾರೇ ಜಯ ಮುರಭಂಜನ ಪಾರ್ಥ ಸಖೇ ತ್ವಂ ।**
**ಭೌಮವಿನಾಶಕ ದುರ್ಜನಹಾರಿನ್ ಸಜ್ಜನ ಪಾಲಕ ಜಯ ದೇವೇಶ ॥**

ಇಲ್ಲಿ ಕೂಡ ಶ್ರೀಕೃಷ್ಣನು ಸಜ್ಜನರನ್ನು ರಕ್ಷಿಸುವವನು, ದುರ್ಜನರನ್ನು ನಾಶಪಡಿಸುವವನು ಎಂಬುದಾಗಿ ಸ್ತೋತ್ರ ಮಾಡಿರುವುದು ಗಮನಾರ್ಹ.

**ಅಕ್ರೂರವಂದ್ಯ ಕಂಸಾರಿ ಕುಬ್ಜಾರಮಣ**
**ನಾರಾಯಣಾಯ ನಮೋ ನಾರಾಯಣ**
**ಆಕ್ರಂದಿಸಿದ ತಂದೆ ತಾಯಿಯರ ಭಯವಳಿದೆ**
**ನಾರಾಯಣಾಯ ನಮೋ ನಾರಾಯಣ ॥16॥**

ಶ್ರೀಕೃಷ್ಣನು ಅಕ್ರೂರನಿಂದ ವಂದ್ಯನಾಗಿದ್ದಾನೆ. ಕಂಸನಿಗೆ ಶತ್ರುವಾಗಿದ್ದಾನೆ. ಕುಬ್ಜೆಯೆನಿಸಿದ ತ್ರಿವಕ್ರೆಯ ರಮಣನಾಗಿದ್ದಾನೆ. ಇಂಥ ಶ್ರೀಕೃಷ್ಣರೂಪಿ ನಾರಾಯಣನಿಗೆ ನಮಸ್ಕಾರವು. ತಂದೆ ತಾಯಿಗಳೆನಿಸಿದ ವಸುದೇವ ದೇವಕಿಯರ ಕಷ್ಟವನ್ನು ಪರಿಹರಿಸಿ ಅವರ ಭಯವನ್ನು ಹೋಗಲಾಡಿಸಿದ ಶ್ರೀಕೃಷ್ಣರೂಪೀ ಭಗವಂತನಿಗೆ ನಮಸ್ಕಾರವು.

**ವಿವರಣೆ – ಶ್ರೀಕೃಷ್ಣನು ಅಕ್ರೂರ ವಂದ್ಯನಾಗಿದ್ದಾನೆ –**

ಅಕ್ರೂರನು ಶ್ರೀಕೃಷ್ಣನ ಅನನ್ಯ ಭಕ್ತನಾಗಿದ್ದಾನೆ. ಇಂಥ ಅಕ್ರೂರನಿಂದ ಶ್ರೀಕೃಷ್ಣ ವಂದ್ಯನು. ದುಷ್ಟನಾದ ಕಂಸನು ಶ್ರೀಕೃಷ್ಣ ಬಲರಾಮರನ್ನು ಸಂಹರಿಸುವ ಉದ್ದೇಶದಿಂದ ಧನುರ್ಯಾಗಕ್ಕಾಗಿ ಕರೆತರಲು ಅಕ್ರೂರನ್ನು ಕಳುಹಿಸಿಕೊಟ್ಟನು. ಅಕ್ರೂರನು ಭಗವಾನ್ ಶ್ರೀಕೃಷ್ಣನಲ್ಲಿ ಪರಮಪ್ರೇಮಮಯ ಭಕ್ತಿಯಿಂದ ಪರಿಪೂರ್ಣನಾಗಿ ಯೋಚಿಸುತ್ತ ಹೊರಟನು. ನಿಶ್ಚಯವಾಗಿಯೂ ಇಂದು ನನ್ನ ಸಮಸ್ತ ಅಮಂಗಲಗಳು, ಅಶುಭಗಳು ನಾಶಹೊಂದಿದವು. ಇಂದು ನನ್ನ ಜನ್ಮ ಸಫಲವಾಯಿತು. ಏಕೆಂದರೆ ಇಂದು ನಾನು ಮಹಾಯೋಗಿ ಯತಿಗಳಿಗೆ ಧ್ಯಾನಕ್ಕೆ ವಿಷಯನಾದ ಭಗವಂತನ ಚರಣಕಮಲಗಳನ್ನು ಸಾಕ್ಷಾತ್ತಾಗಿ ನೋಡಿ ನಮಿಸುತ್ತೇನೆ. [25]

---

25. ಮಮಾದ್ಯಾಮಂಗಲಂ ನಷ್ಟಂ ಫಲವಾಂಶ್ಚೈವ ಮೇ ಭವಃ ।
ಯನ್ನಮಸ್ಯೇ ಭಗವತೋ ಯೋಗಿಧ್ಯೇಯಾಂಘ್ರಿಪಂಕಜಮ್ ॥ (10–38–6)



ಹೀಗೆ ಅನೇಕ ರೀತಿಯಾಗಿ ಯೋಚಿಸುತ್ತ ನಂದಗೋಕುಲವನ್ನು ತಲುಪಿದನು. ಆ ಭಗವಂತನ ಚರಣ ಚಿಹ್ನೆಗಳನ್ನು ವ್ರಜದ ಧೂಲಿಯಲ್ಲಿ ನೋಡಿದ ಕೂಡಲೇ ಅಕ್ರೂರನು ರಥದಿಂದ ಕೆಳಗೆ ಹಾರಿ ಶ್ರೀಕೃಷ್ಣನ ಪವಿತ್ರವಾದ ಪಾದಧೂಳಿಯಲ್ಲಿ ಹೊರಳಾಡಿದನು. ನಂತರ ಅಲ್ಲಿಂದ ಹೊರಟ ಅಕ್ರೂರನು ಶ್ರೀಕೃಷ್ಣ ಬಲರಾಮರನ್ನು ನೋಡಿದನು. ಅವರನ್ನು ನೋಡುತ್ತಲೇ ಅಕ್ರೂರನು ಪ್ರೇಮಾಧಿಕ್ಯದಿಂದ ಭಕ್ತಿಯಿಂದ ಕೂಡಿದವನಾಗಿ ಶ್ರೀಕೃಷ್ಣ ಬಲರಾಮರ ಬಳಿಸಾರಿ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು.

ಶ್ರೀಕೃಷ್ಣನು ಕಂಸಾರಿ ಎನಿಸಿದ್ದಾನೆ –

ಶ್ರೀ ಬ್ರಹ್ಮಾಂಡಪುರಾಣದಲ್ಲಿ ಹೀಗೆ ತಿಳಿಸಿದ್ದಾರೆ. [26]

**ಮುಷ್ಟಿಕಾಸುರ ಚಾಣೂರಮಲ್ಲಯುದ್ಧ ವಿಶಾರದಃ ।**
**ಸಂಸಾರವೈರೀ ಕಂಸಾರಿರ್ಮುರಾರಿರ್ನರಕಾಂತಕಃ ॥**

ಆ ಶ್ರೀಕೃಷ್ಣನು ಮುಷ್ಟಿಕ, ಚಾಣೂರ ಇವರ ಜೊತೆಯುದ್ಧ ಮಾಡುವುದರಲ್ಲಿ ವಿಶಾರದನಾಗಿದ್ದಾನೆ ಮತ್ತು ಸಂಸಾರವೈರಿಯೂ, ಕಂಸಾರಿಯೂ, ಮುರಸಂಹಾರಿಯೂ, ನರಕಾಸುರನನ್ನು ಸಂಹರಿಸಿದವನೂ ಆಗಿದ್ದಾನೆ.

**ಶ್ರೀಕೃಷ್ಣನು ಕುಬ್ಜಾರಮಣನಾಗಿದ್ದಾನೆ –**

ಶ್ರೀಕೃಷ್ಣನು ಧನುರ್ಯಾಗಕ್ಕೆಂದು ಮಥುರಾಪುರಕ್ಕೆ ಬರುತ್ತಾನೆ. ಮರುದಿನ ಪ್ರಾತಃಕಾಲದಲ್ಲಿ ಶ್ರೀಕೃಷ್ಣನು ಉದ್ಯಾನವನದಲ್ಲಿ ವಿಹಾರವಾಡಿ ಅಪರಾಹ್ನದಲ್ಲಿ ಬಲರಾಮ ಮತ್ತು ಗೋಪಾಲಕರಿಂದ ಕೂಡಿ ಮಥುರಾಪುರವನ್ನು ನೋಡಲು ಹೊರಟಾಗ ರಜಕನ ಭೆಟ್ಟಿಯಾಯಿತು. ಅವನು ವಸ್ತ್ರಗಳನ್ನು ಕೇಳಿದ ಶ್ರೀಕೃಷ್ಣನಿಗೆ ಗರ್ವದಿಂದ ಕೊಬ್ಬಿ ಮಾತನಾಡಲು ಅವನ ಶಿರವನ್ನು ಕತ್ತರಿಸಿ ತಮಗೆ ಉಚಿತ ಬಟ್ಟೆಗಳನ್ನು ಸ್ವೀಕರಿಸಿ ಮುಂದೆ ನಡೆಯುತ್ತಾನೆ. ಮಾಲಾಕಾರ ಸುಧಾಮನ ಭೆಟ್ಟಿಯಾಗಲು ಅವನು ಸುಗಂಧ ವಿಶಿಷ್ಟ ಹೂವಿನ ಹಾರವನ್ನು ಅರ್ಪಿಸುತ್ತಾನೆ. ಶ್ರೀಕೃಷ್ಣನು ಅವನಿಗೆ ನಿಶ್ಚಲವಾದ ಭಕ್ತಿಯನ್ನು ಕೊಟ್ಟು ಉದ್ಧರಿಸುತ್ತಾನೆ. ನಂತರ ದಾರಿಯಲ್ಲಿ ತ್ರಿವಕ್ರೆಯು ಭೆಟ್ಟಿಯಾಗುತ್ತಾಳೆ. ಅವಳು ಶ್ರೀಕೃಷ್ಣನಿಗೆ ಯೋಗ್ಯವಾದ ಸುಗಂಧವನ್ನು ಕೊಟ್ಟು ಸಂತೋಷಪಡಿಸಿದಳು. ಅವಳು ಶರೀರದಿಂದ ಮೂರು ಕಡೆ ವಕ್ರಾಗಿದ್ದಳು. ಕಾರಣ ಅವಳಿಗೆ ಕುಬ್ಜೆಯೆಂದು ಕರೆಯುತ್ತಿದ್ದರು. ಶ್ರೀಕೃಷ್ಣನು ಕುಬ್ಜೆಯ ಮೇಲೆ ಪ್ರಸನ್ನನಾಗಿ ತನ್ನ ಸ್ಪರ್ಶಮಾತ್ರದಿಂದ ಅವಳನ್ನು ಸುಂದರ ಸ್ತ್ರೀಯನ್ನಾಗಿ ಮಾಡುತ್ತಾನೆ[27] ಮುಂದೆ ಈ ತ್ರಿವಕ್ರೆಯನ್ನು (ಕುಬ್ಜೆಯನ್ನು) ಶ್ರೀಕೃಷ್ಣನು ಸ್ವೀಕರಿಸಿ ಅವಳಲ್ಲಿ "ವಿಶೋಕ" ನೆಂಬ ಪುತ್ರನನ್ನು ಪಡೆಯುತ್ತಾನೆ. ಆದ್ದರಿಂದ ಶ್ರೀಕೃಷ್ಣನಿಗೆ ಕುಬ್ಜಾರಮಣನೆಂದು ಕರೆಯುತ್ತಾರೆ.

---

26. ಶ್ರೀಕೃಷ್ಣ ಅಷ್ಟೋತ್ತರಶತನಾಮಸ್ತೋತ್ರ – 13ನೆ ಶ್ಲೋಕ
27. ಗಂಧವಿತ್ತಬಲೆಯಳ ಕುಂದನೆಣಿಸದೆ ಪರಮ
    ಸುಂದರಿಯ ಮಾಡಿ ವಶನಾದ / ವಶನಾದ ಗೋ
    ವಿಂದ ಗೋವಿಂದ ನೀನೆಂಥ ಕರುಣಾಳೋ ॥
    ಶ್ರೀ ಜಗನ್ನಾಥದಾಸರ ತತ್ವ ಸುವ್ವಾಲಿ 149ನೇ ನುಡಿ.

**ಆಕ್ರಂದಿಸಿದ ತಂದೆ ತಾಯಿಯರ ಭಯವಳಿದೆ –**

ಶ್ರೀಕೃಷ್ಣನು ತಂದೆತಾಯಿಯರಾದ ವಸುದೇವ ದೇವಕಿಯರ ಭಯವನ್ನು ಹೋಗಲಾಡಿಸಿದ ವಿಷಯವನ್ನು ಇಲ್ಲಿ ತಿಳಿಸುತ್ತಾರೆ.

ಅಶರೀರವಾಣಿಯು ಉದ್ವಾಹಪರ್ವದಲ್ಲಿ ದೇವಕಿಯ ಎಂಟನೆಯ ಗರ್ಭವು ನಿನಗೆ ಮೃತ್ಯುವಾಗಿದೆಯೆಂದು ಕಂಸನನ್ನು ಕುರಿತು ಹೇಳಿದಾಗ ಕಂಸನು ವಸುದೇವ ದೇವಕಿಯರನ್ನು ಕಾರಾಗೃಹದಲ್ಲಿ ಇರಿಸಿದನು. ವಸುದೇವ ದೇವಕಿಯರು ತುಂಬಾ ದುಃಖಪಟ್ಟರು. ಕೊನೆಗೆ ಶ್ರೀಕೃಷ್ಣನು ಕಂಸನನ್ನು ಸಂಹರಿಸಿ ತಂದೆ ತಾಯಿಯರಿಗೆ ಉಂಟಾದ ಭಯವನ್ನು ನಾಶಪಡಿಸಿದನು.

ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರಗಳು.

**ಅದಿತಿ ಕುಂಡಲದಾತ ಭಗದತ್ತವರದನೆ**
**ನಾರಾಯಣಾಯ ನಮೋ ನಾರಾಯಣ ।**
**ಅಧಿಪತಿಗಳಧಿಪತಿಯೆ ಭೈಷ್ಮೀಸತ್ಯಾರಮಣ**
**ನಾರಾಯಣಾಯ ನಮೋ ನಾರಾಯಣ ॥17॥**

– ದೇವಮಾತಾ ಅದಿತಿದೇವಿಗೆ ಕರ್ಣಕುಂಡಲಗಳನ್ನು ಕೊಟ್ಟ, ನರಕಾಸುರನ ಪುತ್ರ ಭಗದತ್ತನಿಗೆ ವರವನ್ನು ನೀಡಿದ ನಾರಾಯಣನೇ ನಿನಗೆ ನಮಸ್ಕಾರವು. ಈ ಜಗತ್ತಿನಲ್ಲಿರುವ ಅಧಿಪತಿಗಳಿಗೆಲ್ಲಾ ಅಧಿಪತಿಯೆನಿಸಿದ, ರುಕ್ಮಿಣೀ ಸತ್ಯಭಾಮಾದೇವಿಯರಿಗೆ ಪತಿಯಾದ ನಾರಾಯಣನೇ ನಮಸ್ಕಾರವು.

**ವಿವರಣೆ – ಅದಿತಿ ಕುಂಡಲದಾತ –**

ಹಿಂದೆ ನರಕಾಸುರನು ಅದಿತಿಯ ಕುಂಡಲಗಳನ್ನು, ವರುಣನ ಛತ್ರವನ್ನು, ದೇವತೆಗಳ ಮಣಿಪರ್ವತವೆಂಬ ಸ್ಥಾನವನ್ನು ಅಪಹರಿಸಿದ್ದನು. ಇದರಿಂದ ಬೇಸತ್ತು ದೇವೇಂದ್ರನು ದ್ವಾರಕೆಗೆ ಬಂದು ಭಗವಾನ್ ಶ್ರೀಕೃಷ್ಣನಲ್ಲಿ ನರಕಾಸುರನ ಉಪಟಳವನ್ನು ನಿವೇದಿಸಿಕೊಂಡನು. ಆಗ ಶ್ರೀಕೃಷ್ಣನು ಸತ್ಯಭಾಮಾದೇವಿಯ ಜೊತೆ ಗರುಡನನ್ನೇರಿ ನರಕಾಸುರನ ರಾಜಧಾನಿಯಾದ ಪ್ರಾಗ್ಜ್ಯೋತಿಷ ಪುರವನ್ನು ಕುರಿತು ಹೋದನು[28] ನರಕಾಸುರನ ಪಟ್ಟಣದ ಸುತ್ತಲೂ ಇರುವ ಶಸ್ತ್ರದುರ್ಗ, ಜಲದುರ್ಗ, ಅಗ್ನಿದುರ್ಗ, ವಾಯುದುರ್ಗ ಎಲ್ಲವನ್ನೂ ಶ್ರೀಕೃಷ್ಣನು ನಾಶಪಡಿಸಿದನು. ನಂದಕವೆಂಬ ಖಡ್ಗದಿಂದ ಮುರಾಸುರನ ಪಾಶಗಳನ್ನು ಕತ್ತರಿಸಿ ಹಾಕಿದನು. ನಂತರ ಶ್ರೀಕೃಷ್ಣನು ತನ್ನ ಚಕ್ರದಿಂದ ಮುರಾಸುರನನ್ನು ಸಂಹಾರಮಾಡಿದನು. ಕೂಡಲೇ ನರಕಾಸುರನು ಸಿಟ್ಟಿನಿಂದ ಯುದ್ಧಕ್ಕೆ ಸನ್ನದ್ಧನಾಗಿ ಬಂದನು. ಯುದ್ಧ ಪ್ರಾರಂಭವಾಯಿತು. ಶ್ರೀಕೃಷ್ಣನನ್ನು ಕೊಲ್ಲಲು ನರಕಾಸುರನು ತನ್ನ ತ್ರಿಶೂಲ ಆಯುಧವನ್ನು ಪ್ರಯೋಗಿಸುವಷ್ಟರಲ್ಲಿಯೇ ಶ್ರೀಕೃಷ್ಣನು

---

28. ಇಂದ್ರೇಣ ಹೃತಚ್ಛತ್ರೇಣ ಹೃತಕುಂಡಲಬಂಧುನಾ ।
ಹೃತಾಮರಾದ್ರಿ ಸ್ಥಾನೇನ ಜ್ಞಾಪಿತೋ ಭೌಮ ಚೇಷ್ಟಿತಮ್ ।
ಸಭಾರ್ಯೋ ಗರುಡಾರೂಢಃ ಪ್ರಾಗ್ಜ್ಯೋತಿಷಪುರಂ ಯಯೌ ॥ ಶ್ರೀಮದ್ ಭಾಗವತ (10–59–2)



ಚಕ್ರಾಯುಧದಿಂದ ನರಕಾಸುರನ ತಲೆಯನ್ನು ಕತ್ತರಿಸಿ ಹಾಕಿದನು. ದೇವತೆಗಳು ಪುಷ್ಪವೃಷ್ಟಿ ಮಾಡಿದರು. ನರಕಾಸುರನ ತಾಯಿಯಾದ ಭೂದೇವಿಯು ಬಂದು ಶ್ರೀಕೃಷ್ಣನ ಕೊರಳಿಗೆ ವೈಜಯಂತಿಯೊಂದಿಗೆ ವನಮಾಲೆಯನ್ನು ತೊಡಿಸಿದಳು. ಮತ್ತು ಅದಿತಿಯ ಕುಂಡಲಗಳನ್ನು ಭಗವಾನ್ ಶ್ರೀಕೃಷ್ಣನಿಗೆ ನೀಡಿದಳು. ಶ್ರೀಕೃಷ್ಣನು ಅವುಗಳನ್ನು ದೇವಮಾತೆ ಅದಿತಿಗೆ ಕೊಟ್ಟು ಸಂತೋಷಪಡಿಸಿದನು.

**ಭಗದತ್ತವರದನೆ –**

ಶ್ರೀಕೃಷ್ಣನು ನರಕಾಸುರನನ್ನು ಸಂಹರಿಸಿದ ತರುವಾಯ ಭೂದೇವಿಯು ನರಕಾಸುರನ ಮಗ ಭಗದತ್ತನನ್ನು ಕರೆದುಕೊಂಡು ಬಂದು – " ಶರಣಾಗತ ಭಯಭಂಜನ ಪ್ರಭುವೇ! ನನ್ನ ಪುತ್ರ ನರಕಾಸುರನ ಮಗನಾದ ಈ ಭಗದತ್ತನು ಭಯಗೊಂಡಿದ್ದಾನೆ. ನೀನು ಇವನನ್ನು ರಕ್ಷಿಸು, ಇವನಿಗೆ ಅಭಯನೀಡು" ಎಂದಳು. ಆಗ ಶ್ರೀಕೃಷ್ಣನು ಭಗದತ್ತನಿಗೆ ಅಭಯವನ್ನಿತ್ತು ಪ್ರಾಗ್ಜ್ಯೋತಿಷಪುರಕ್ಕೆ ಅವನನ್ನು ರಾಜನನ್ನಾಗಿ ಮಾಡಿದನು. ಶ್ರೀ ಪ್ರಸನ್ನವೆಂಕಟದಾಸರೇ ತಮ್ಮ "ಹಕ್ಕಿಯ ಹೆಗಲೇರಿ ಬಂದವಗೆ" ಪದ್ಯದಲ್ಲಿ ಹೀಗೆ ವರ್ಣಿಸಿದ್ದಾರೆ –

**ಉತ್ತಮ ಪ್ರಾಗ್ಜ್ಯೋತಿಷ ಪುರವ ಭಗ**
**ದತ್ತಗೆ ಕೊಟ್ಟ ವರಾಭಯವ**
**ಕರ್ತ ಕೃಷ್ಣಯ್ಯನ ನಂಬಿದೆ ಶ್ರೀ**
**ಮೂರ್ತಿಯ ಪಾದವ ಹೊಂದಿದೆ ॥.**

**ಅಧಿಪತಿಗಳಧಿಪತಿಯೆ ಭೈಷ್ಮೀಸತ್ಯಾರಮಣ.**

ಶ್ರೀಕೃಷ್ಣನು ಈ ಜಗತ್ತಿನಲ್ಲಿರುವ ಅಧಿಪತಿಗಳಿಗೆಲ್ಲ ಅಧಿಪತಿಯೆನಿಸಿದ್ದಾನೆ. ಭಗವಂತನು ಅನಾದಿಯಾಗಿ ಅಧಿಪತಿಯಾಗಿರುವವನು. ಹೊರತು ಅವನ ಅಧಿಪತ್ಯವು ಆದಿವುಳ್ಳದ್ದಲ್ಲ. ಎಂಬ ಅಭಿಪ್ರಾಯದಲ್ಲಿ ಬೃಹದಾರಣ್ಯಕ ಉಪನಿಷತ್ತಿನಲ್ಲಿ ತಿಳಿಸಲಾಗಿದೆ[29] ಇದೇ ಅರ್ಥದಲ್ಲಿ ಶ್ರೀವಿಷ್ಣುಸಹಸ್ರನಾಮಸ್ತೋತ್ರದಲ್ಲಿ ಭಗವಂತನನ್ನು "ಭೂತಭವ್ಯ ಭವನ್ನಾಥಃ" ಎಂದು ಸಂಬೋಧಿಸಲಾಗಿದೆ.

ಇನ್ನು ಶ್ರೀಕೃಷ್ಣನು ಭೀಷ್ಮಕ ರಾಜನ ಮಗಳಾದ ರುಕ್ಮಿಣೀರಮಣನಾಗಿದ್ದಾನೆ. ಅಂತೆಯೇ ಅವನಿಗೆ ಭೈಷ್ಮೀ ರಮಣನೆಂದು ಹೆಸರು ಬಂದಿದೆ.

ಭೀಷ್ಮಕಪುತ್ರಿ ರುಕ್ಮಿಣಿಯನ್ನು ಅವಳ ಅಣ್ಣ ರುಕ್ಮಿಯು ಶಿಶುಪಾಲನಿಗೆ ಅವಳನ್ನು ಕೊಡುವುದಾಗಿ ಮಾತುಕೊಟ್ಟಿದ್ದ. ಇದನ್ನು ತಿಳಿದ ರುಕ್ಮಿಣಿಯು ಬ್ರಾಹ್ಮಣನ ಮೂಲಕ ಶ್ರೀಕೃಷ್ಣನಿಗೆ ಪತ್ರವೊಂದನ್ನು ಬರೆದು ಕಳಿಸಿಕೊಟ್ಟಳು. ಬ್ರಾಹ್ಮಣನು ಪತ್ರವನ್ನು ಶ್ರೀಕೃಷ್ಣನಿಗೆ ತಂದುಕೊಟ್ಟ. ಶ್ರೀಕೃಷ್ಣನು ಕೂಡಲೆ ಬ್ರಾಹ್ಮಣನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟು ಬಂದ. ಅಂಬಿಕಾದೇವಾಲಯಕ್ಕೆ ಬಂದು ರುಕ್ಮಿಣಿಯನ್ನು ಎತ್ತಿ ರಥದಲ್ಲಿ ಕೂಡ್ರಿಸಿಕೊಂಡು ದ್ವಾರಕೆಗೆ ಬಂದು ಬಿಟ್ಟ. ದ್ವಾರಕೆಗೆ ಬಂದು "ಮೂಲಮಾಧವ"ಕ್ಕೆ ಎಲ್ಲರನ್ನು ಕರೆತಂದು ವಿಧಿ ಪೂರ್ವಕವಾಗಿ ವಿವಾಹ ಮಾಡಿಕೊಂಡನು. ದ್ವಾರಕೆಯ ಜನರೆಲ್ಲ ಆನಂದಸಾಗರದಲ್ಲಿ ಮುಳುಗಿ ಹೋದರು.

29. ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಏಷಭೂತಪಾಲಃ ॥ ಬೃ.ಉ. 6–4––22

ಸತ್ರಾಜಿತರಾಜನು ಸ್ಯಮಂತಕಮಣಿಯ ನಿಮಿತ್ತವಾಗಿ ಶ್ರೀಕೃಷ್ಣನಿಗೆ ಅಪವಾದ ಕೊಟ್ಟನು. ಶ್ರೀಕೃಷ್ಣನು ಅಪವಾದವನ್ನು ಕಳೆದುಕೊಳ್ಳಲು ಸ್ಯಮಂತಕಮಣಿ ಧರಿಸಿದ್ದ ಪ್ರಸೇನರಾಜನಿಗಾಗಿ ಅಡವಿಯಲ್ಲಿ ಹುಡುಕಾಡಿ ಜಾಂಬವಂತನ ಗುಹೆಗೆ ಬಂದು ಜಾಂಬವಂತನ ಜೊತೆ 28 ದಿನ ಯುದ್ಧಮಾಡಿ ಅವನನ್ನು ಸೋಲಿಸಿ ಸ್ಯಮಂತಕಮಣಿ ಮತ್ತು ಜಾಂಬವತಿಯನ್ನು ಪಡೆದುಕೊಂಡನು. ಶ್ರೀಕೃಷ್ಣನು ಸತ್ರಾಜಿತರಾಜನನ್ನು ಉಗ್ರಸೇನರಾಜನ ಸಭೆಗೆ ಕರೆಸಿ ಮಣಿ ಪ್ರಾಪ್ತವಾದ ವಿಷಯ ತಿಳಿಸಿ ಸತ್ರಾಜಿತನಿಗೆ ಒಪ್ಪಿಸಿದನು. ಸತ್ರಾಜಿತನು ಇದರಿಂದ ಲಜ್ಜಿತನಾಗಿ ಶ್ರೀಕೃಷ್ಣನಿಗೆ ಸ್ಯಮಂತಕಮಣಿಯನ್ನು ಹಾಗು ಶ್ರೀ ಸತ್ಯಭಾಮಾದೇವಿಯನ್ನು ಕೊಟ್ಟು ಮದುವೆ ಮಾಡಿಸಿ ಅವನನ್ನು ಸಂತೋಷಪಡಿಸಿದನು. ಸ್ಯಮಂತಕಮಣಿಯನ್ನು ಶ್ರೀಕೃಷ್ಣನು ಸತ್ರಾಜಿತನಿಗೆ ಮರಳಿ ಕೊಟ್ಟುಬಿಟ್ಟನು.

ಹೀಗೆ ಶ್ರೀಕೃಷ್ಣರೂಪೀ ನಾರಾಯಣನಿಗೆ "ಭೈಷ್ಮೀಸತ್ಯಾರಮಣ" ಎಂಬುದಾಗಿ ಹೆಸರು ಬಂತು.

**ಶಂಭುವಂದಿತಪಾದ ಸಾಂದೀಪೋದ್ಧವ ಪ್ರಿಯ ।**
**ನಾರಾಯಣಾಯ ನಮೋ ನಾರಾಯಣ**
**ಶಂಬರಾರಿಯ ಜನಕ ಯಜ್ಞಪೂಜಾಗ್ರಣಿಯೆ ।**
**ನಾರಾಯಣಾಯ ನಮೋ ನಾರಾಯಣ ॥18॥**

ಆ ಭಗವಂತನು ರುದ್ರದೇವರಿಂದ ವಂದಿತ ಪಾದವುಳ್ಳವನಾಗಿದ್ದಾನೆ. ಸಾಂದೀಪನಿ ಗುರುಗಳು ಮತ್ತು ಉದ್ಧವ ಇವರಿಗೆ ಪ್ರಿಯನಾದವನು ಶ್ರೀಕೃಷ್ಣ. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು. ಶಂಬರಾಸುರನ ಶತ್ರುವಾದ ಪ್ರದ್ಯುಮ್ನನ ಜನಕನು ಶ್ರೀಕೃಷ್ಣ. ರಾಜಸೂಯಯಾಗದಲ್ಲಿ ಅಗ್ರಪೂಜೆಯಾರಿಗೆ ಮಾಡಬೇಕೆಂದು ಧರ್ಮರಾಜನು ಭೀಷ್ಮಾಚಾರ್ಯರನ್ನು ಕೇಳಿದಾಗ ಅವರು ಶ್ರೀಕೃಷ್ಣನಿಗೆ ಅಗ್ರಪೂಜೆ ಮಾಡಬೇಕೆಂದು ಆಜ್ಞೆ ಮಾಡಿದರು. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

**ವಿವರಣೆ – ಆ ಭಗವಂತನು "ಶಂಭುವಂದಿತ ಪಾದ"** ನಾಗಿದ್ದಾನೆ –

ಶ್ರೀಮಧ್ವಾಚಾರ್ಯರು ಭಗವಂತನನ್ನು ಕುರಿತು ಸ್ತೋತ್ರ ಮಾಡಿದ್ದಾರೆ.[30]

**ನಿಃಶೇಷದೋಷರಹಿತ ಕಲ್ಯಾಣಾಖಿಲಸದ್ಗುಣ ।**
**ಭೂತಿಸ್ವಯಂಭು ಶರ್ವಾದಿ ವಂದ್ಯಂ ತ್ವಾಂ ನೌಮಿ ಮೇ ಪ್ರಿಯಮ್ ॥**

ಸರ್ವದೋಷರಹಿತನಾದ, ಸರ್ವಕಲ್ಯಾಣಗುಣಪೂರ್ಣನಾದ, ಲಕ್ಷ್ಮೀ, ಬ್ರಹ್ಮ, ರುದ್ರಾದಿ ದೇವತೆಗಳಿಂದ ವಂದ್ಯನಾದ, ನನಗೆ ಪ್ರಿಯನಾದ ನಿನ್ನನ್ನು ನಮಸ್ಕರಿಸುತ್ತೇನೆ.

ಅವರೇ ಇನ್ನೊಂದು ಗ್ರಂಥದಲ್ಲಿ ಹೀಗೆ ಬಣ್ಣಿಸಿದ್ದಾರೆ.[31]

**ಚೇತನಾಚೇತನ ಜಗನ್ನಿಯಂತ್ರೇಽಶೇಷ ಸಂವಿದೇ ।**
**ನಮೋ ನಾರಾಯಣಾಯಾಜ ಶರ್ವಶಕ್ರಾದಿ ವಂದಿತ ॥**

---

30. ಅನುವ್ಯಾಖ್ಯಾನ ಅಂತ್ಯಶ್ಲೋಕ
31. ನ್ಯಾಯವಿವರಣ ಮಂಗಲಾಚರಣ ಶ್ಲೋಕ

ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ವಂದ್ಯನಾದ, ಚೇತನಾಚೇತನ ಜಗತ್ತಿಗೆ ನಿಯಾಮಕನಾದ, ಪೂರ್ಣಜ್ಞಾನ ಸ್ವರೂಪನಾದ ನಾರಾಯಣನಿಗೆ ನಮಸ್ಕಾರವು.

**ಸಾಂದೀಪೋದ್ಧವ ಪ್ರಿಯ –**

ಶ್ರೀಕೃಷ್ಣನು ಸಾಂದೀಪನಿ ಗುರುಗಳಿಗೆ, ಉದ್ಧವನಿಗೆ ಪ್ರಿಯನಾದವನಾಗಿದ್ದಾನೆ.

ಉಪನಯನ ಸಂಸ್ಕಾರ ಹೊಂದಿದ ಶ್ರೀಕೃಷ್ಣ, ಬಲರಾಮರು ಸಾಂದೀಪನಿ ಗುರುಗಳ ಹತ್ತಿರ ವಿದ್ಯಾಭ್ಯಾಸಕ್ಕಾಗಿ ಹೋದರು. 64 ವಿದ್ಯೆಗಳನ್ನು 64 ದಿನಗಳಲ್ಲಿ ಕಲಿತರು (ಏಕೆಂದರೆ ಅಷ್ಟುದಿನಗಳು ಅಷ್ಟು ವಿದ್ಯೆಗಳನ್ನು ಉಚ್ಚರಿಸಲು ಗುರುಗಳಿಗೆ ಅವಶ್ಯವಾಗಿದ್ದವು), ನಂತರ ಗುರುದಕ್ಷಿಣೆಯಾಗಿ ಶ್ರೀಕೃಷ್ಣನು ಗುರುಗಳ ಇಚ್ಛೆಯಂತೆ ಹಿಂದೆಯೇ ತೀರಿಹೋದ ಅವರ ಮಗನನ್ನು ಸಂಯಮನೀಪುರದಿಂದ ತಂದುಕೊಟ್ಟನು. ಗುರುಗಳು ಸಂತೋಷಪಟ್ಟು" "ನಿಮ್ಮ ಕೀರ್ತಿ ಅಜರಾಮರವಾಗಲಿ" ಎಂದು ಹಾರೈಸಿ ಬೀಳ್ಕೊಟ್ಟರು. ಹೀಗೆ ಶ್ರೀಕೃಷ್ಣ ಸಾಂದೀಪನಿ ಗುರುಗಳಿಗೆ ಪ್ರಿಯನಾಗಿದ್ದನು.

ಉದ್ಧವನು ವೃಷ್ಣಿವಂಶೀಯರಲ್ಲಿ ಪ್ರಧಾನ ಪುರುಷನಾಗಿದ್ದನು. ಬೃಹಸ್ಪತಿಯ ಸಾಕ್ಷಾತ್ ಶಿಷ್ಯನಾಗಿದ್ದ ಅವನು ಪರಮ ಬುದ್ಧಿಶಾಲಿಯಾಗಿದ್ದನು. ಮಿಗಿಲಾಗಿ ಶ್ರೀಕೃಷ್ಣನ ಮಂತ್ರಿಯೂ ಪ್ರಿಯಸಖನೂ ಆಗಿದ್ದನು.[32] ಶ್ರೀಕೃಷ್ಣನು ತಾನು ಪರಂಧಾಮಕ್ಕೆ ಹೋಗುವ ಮೊದಲು ಉದ್ಧವನನ್ನು ಕುರಿತು ಮೋಕ್ಷಸಾಧನವಾದ ಜ್ಞಾನೋಪದೇಶವನ್ನು ಮತ್ತು ಭಾಗವತ ಧರ್ಮಗಳನ್ನು ಉಪದೇಶ ಮಾಡಿದನು. ಇದರಿಂದ ಉದ್ಧವನಿಗೆ ಪ್ರಿಯನಾದವನು ಶ್ರೀಕೃಷ್ಣ ಎಂಬುದು ತಿಳಿದುಬರುತ್ತದೆ.

**ಶಂಬರಾರಿಜನಕ ಯಜ್ಞಪೂಜಾಗ್ರಣಿಯೆ –**

ಶಂಬರನು ಮಹಾಮಾಯಾವಿ ಅಸುರ. ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನಿಂದ ತಾನು ಸಾಯುವೆನೆಂಬುದನ್ನು ತಿಳಿದು ಆತನನ್ನು ಕೊಲ್ಲಲು ಪ್ರಯತ್ನಿಸಿ ತಾನೇ ಅವನಿಂದ ಹತನಾದನು.

ಧರ್ಮರಾಜನು ರಾಜಸೂಯಯಾಗವನ್ನು ಮಾಡಲು ಪ್ರಾರಂಭಿಸಿದನು. ಆಗ ಅಗ್ರಪೂಜೆ ಯಾರಿಗೆ ಮಾಡಬೇಕು? ಎಂಬ ವಿಷಯದಲ್ಲಿ ಚರ್ಚೆ ಪ್ರಾರಂಭವಾಯಿತು. ಆಗ ಧರ್ಮರಾಜನು ಧರ್ಮ ಬಲ್ಲವನಾಗಿದ್ದರೂ, ಶ್ರೀಕೃಷ್ಣನು ಅತ್ಯಂತ ಪೂಜ್ಯನಾದ ಶ್ರೀಹರಿಯೆಂದು ಬಲ್ಲವನಾಗಿದ್ದರೂ ನೆರೆದ ಎಲ್ಲ ರಾಜರುಗಳ ಸಂಶಯವನ್ನು ಪರಿಹರಿಸಲು ಭೀಷ್ಮಾಚಾರ್ಯರನ್ನು ಕೇಳಿದನು.[33]

ಆಗ ಭೀಷ್ಮಾಚಾರ್ಯರು ಹೇಳಿದರು "ಶ್ರೀಕೃಷ್ಣನೇ ಸರ್ವರಿಗೂ ಪ್ರಭುವು, ಪರಮ ಪೂಜ್ಯನು"[34] ಒಬ್ಬನೇ ನಾರಾಯಣನು ವಸಿಷ್ಠ, ಭೃಗು ಮತ್ತು ವೃಷ್ಣಿವಂಶಗಳಲ್ಲಿ ಮೂರು ರೂಪಗಳಿಂದ

---

32. ವೃಷ್ಣೀನಾಂ ಪ್ರವರೋ ಮಂತ್ರೀ ಕೃಷ್ಣಸ್ಯ ದಯಿತಾ ಸಖಾ।
ಶಿಷ್ಯೋ ಬೃಹಸ್ಪತೇಃ ಸಾಕ್ಷಾದುದ್ಧವೋ ಬುದ್ಧಿಸತ್ತಮಃ ॥ ಶ್ರೀಮದ್ ಭಾಗವತ (10–46–1)

33. ಜಾನಮಾನೋಽಪಿ ನೃಪತಿಃ ಸರ್ವಪೂಜ್ಯತಮಂ ಹರಿಮ್।
ಸಂಶಯಂ ಭೂಭೃತಾಂ ಭೇತ್ತುಂ ಭೀಷ್ಮಂ ಪಪ್ರಚ್ಛ ಧರ್ಮವಿತ್॥ ಮ. ಭಾ.ತಾ. ನಿ (21.239)

34. ಪಿತಾಮಹಾಗ್ರಪೂಜಾರ್ಹಃ ಕೋಽತ್ರ ಲೋಕ ಸಮಾಗಮೇ।
ಬ್ರಹ್ಮಶರ್ವಾದಯಶ್ಚಾತ್ರ ಸಂತಿ ರಾಜಾನ ಏವ ಚ ।
ಇತಿಪೃಷ್ಟೋಽಬ್ರವೀದ್ಭೀಷ್ಮಃ ಕೃಷ್ಣಂ ಪೂಜ್ಯತಮಂ ಪ್ರಭುಮ್ ॥ ಶ್ರೀ ಮ. ಭಾ. ತಾ. ನಿ. (21.244)



ಪ್ರಾದುರ್ಭವಿಸಿರುವನು. ಆದರೂ ವ್ಯಾಸ ಪರಶುರಾಮರು ವಿಪ್ರರಾದ್ದರಿಂದ ಈ ರಾಜರು ವಿರೋಧ ಮಾಡುವದಿಲ್ಲ. ಬದಲಾಗಿ ಯುಕ್ತವೆಂದೇ ಭಾವಿಸುವರು ವಿವಾದ ಹುಟ್ಟದಿದ್ದಲ್ಲಿ ಶ್ರೀಕೃಷ್ಣನು ನಾರಾಯಣನು ಎನ್ನುವದು ಎಲ್ಲೂ ಪ್ರಸಿದ್ಧಿಗೊಳ್ಳುವದಿಲ್ಲ. ಆದ್ದರಿಂದ ಶ್ರೀಕೃಷ್ಣನಿಗೆ ಅಗ್ರಪೂಜೆ ನೀಡಬೇಕೆಂದು ಭೀಷ್ಮರು ತಿಳಿಸಿದರು. ಹಾಗಾಗಿ ಶ್ರೀಕೃಷ್ಣನಿಗೆ ಅಗ್ರಪೂಜೆ ನೆರವೇರಿತು. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

**ಪಾಂಡವರ ಪ್ರಾಣ ದ್ರೌಪದಿ ಮಾನರಕ್ಷಕನೆ**
**ನಾರಾಯಣಾಯ ನಮೋ ನಾರಾಯಣ ।**
**ಪೌಂಡ್ರಕ ಶೃಗಾಲ ಕೌರವ ಭೂಮಿಭಾರಹರ**
**ನಾರಾಯಣಾಯ ನಮೋ ನಾರಾಯಣ ॥ 19 ॥**

ಶ್ರೀಕೃಷ್ಣನು ಪಾಂಡವರನ್ನು ತನ್ನ ಪ್ರಾಣದಂತೆ ಕಾಣುವವನು. ದ್ರೌಪದೀ ದೇವಿಯವರ ಮಾನರಕ್ಷಣೆ ಮಾಡಿದವನು. ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರಗಳು. ಪೌಂಡ್ರಕ ವಾಸುದೇವ, ಶೃಗಾಲ ವಾಸುದೇವ, ದುರ್ಯೋಧನ ಇವರೆಲ್ಲರೂ ಭೂಮಿಗೆ ಭಾರವಾದವರು. ಇವರನ್ನು ಶ್ರೀಕೃಷ್ಣನು ಸಂಹಾರಮಾಡಿ ಭೂಭಾರವನ್ನು ಕಡಿಮೆ ಮಾಡಿದನು. ಇಂಥ ಶ್ರೀ ನಾರಾಯಣನಿಗೆ ನಮಸ್ಕಾರವು.

**ವಿವರಣೆ : – ಪಾಂಡವರ ಪ್ರಾಣ, ದ್ರೌಪದಿ ಮಾನರಕ್ಷಕನೆ –**

ಶ್ರೀಕೃಷ್ಣನು ಪಾಂಡವರ ಪ್ರಾಣನೆನಿಸಿದ್ದಾನೆ. ಇದು ಈ ಕೆಳಗಿನ ಪ್ರಸಂಗದಿಂದ ತಿಳಿದು ಬರುತ್ತದೆ.

ಪಾಂಡವರು ವನವಾಸ ಮುಗಿಸಿ ಬಂದ ನಂತರ ಪುತ್ರವ್ಯಾಮೋಹಕ್ಕೆ ಒಳಗಾಗಿ ಧೃತರಾಷ್ಟ್ರನು ಪಾಂಡವರಿಗೆ ರಾಜ್ಯವನ್ನು ನೀಡಲಿಲ್ಲ, ಆಗ ಕೃಷ್ಣನು ಸಂಧಿಗಾಗಿ ಹಸ್ತಿನಾವತಿಗೆ ಬಂದನು. ಶ್ರೀಕೃಷ್ಣನನ್ನು ಭೀಷ್ಮರೇ ಮೊದಲಾದವರು ಭಕ್ತಿಪೂರ್ವಕವಾಗಿ ಇದಿರು ಗೊಂಡರು. ಅವರಿಂದ ಆದರಿಸಲ್ಪಟ್ಟವನಾಗಿ ಶ್ರೀಕೃಷ್ಣನು ಧೃತರಾಷ್ಟ್ರನ ಮನೆಗೆ ಹೋದನು. ಧೃತರಾಷ್ಟ್ರ ಶ್ರೀಕೃಷ್ಣನನ್ನು ವಿಶೇಷವಾಗಿ ಪೂಜಿಸಿದ. ನಂತರ ಶ್ರೀಕೃಷ್ಣ ದುರ್ಯೋಧನನ ಮನೆಗೆ ತೆರಳಿದ. ಅವನೂ ಶ್ರೀಕೃಷ್ಣನನ್ನು ಸತ್ಕರಿಸಿದ. ಆದರೆ ದುರ್ಯೋದನನು ನೀಡಿದ ಪೂಜೆಯನ್ನು ಅವನು ಗುಣವಂತರಾದ ಪಾಂಡವರ ದ್ವೇಷಿ ಎಂಬ ಕಾರಣದಿಂದ ಸ್ವೀಕರಿಸಲಿಲ್ಲ. ಶ್ರೀಕೃಷ್ಣ ಅವನನ್ನು ಕುರಿತು ಹೇಳಿದ –

"ಶತ್ರುಗಳ ಅನ್ನವನ್ನು ತಿನ್ನಕೂಡದು. ಶತ್ರುವಿಗೆ ಅನ್ನ ನೀಡಕೂಡದು ನೀನು ನೇರವಾಗಿ ನನ್ನ ಶತ್ರುವಲ್ಲ ನಿಜ. ಆದರೆ ನನ್ನ ಪರಮ ಭಕ್ತರಾದ ಪಾಂಡವರನ್ನು ದ್ವೇಷಿಸುವವನು. ಪಾಂಡವರೆಂದರೆ ನನಗೆ ಪಂಚಪ್ರಾಣ ಅವರ ದ್ವೇಷಿ ನನ್ನ ದ್ವೇಷಿಯೇ ಸರಿ"[35]

ಶ್ರೀಕೃಷ್ಣ ದ್ರೌಪದಿಯ ಮಾನರಕ್ಷಣೆಯನ್ನು ಮಾಡಿದ ಪ್ರಸಂಗ ಹೀಗಿದೆ.

---

35. ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ ।
ಪಾಂಡವಾನ್ ದ್ವಿಷತೇ ರಾಜನ್ ಮಮ ಪ್ರಾಣಾ ಹಿ ಪಾಂಡವಾಃ ॥
ಶ್ರೀಮನ್ ಮಹಾಭಾರತ ಉದ್ಯೋಗಪರ್ವ ॥ 91ನೆ ಅಧ್ಯಾಯ

ಶಕುನಿಯ ಸಲಹೆಯಂತೆ ಪಾಂಡವರ ಸಂಪತ್ತನ್ನು ಪಡೆದುಕೊಳ್ಳಲು ದುರ್ಯೋಧನನು ತಂದೆ ಧೃತರಾಷ್ಟ್ರನ ಬಳಿ ಹೇಳಿದಾಗ ಧೃತರಾಷ್ಟ್ರನು ವಿದುರನ ಮೂಲಕ ಧರ್ಮರಾಜನಿಗೆ ದ್ಯೂತಕ್ಕೆ ಬರಲು ಹೇಳಿ ಕಳುಹಿಸಿದನು. ಜೂಜಿಗೆ ಒಪ್ಪಿಕೊಂಡು ಧರ್ಮರಾಜ ತಮ್ಮಂದಿರ ಜೊತೆಯಲ್ಲಿ ಬಂದ. ಭೀಮಸೇನ ಹಾಗೂ ವಿದುರರು ತಡೆದರೂ ಕೂಡ ಧರ್ಮರಾಜನು ತನ್ನ ಎಲ್ಲ ಸಂಪತ್ತನ್ನು ದ್ಯೂತದಲ್ಲಿ ಪಣವಾಗಿ ಇಟ್ಟು ಸೋತು ಬಿಟ್ಟ. ನಂತರ ಧರ್ಮರಾಜ ನಕುಲ, ಸಹದೇವ, ಅರ್ಜುನ ನಂತರ ಭೀಮಸೇನನನ್ನು ಮುಂದೆ ದ್ರೌಪದಿಯನ್ನು, ಕ್ರಮವಾಗಿ ತನ್ನನ್ನೂ ಪಣಕ್ಕಿಟ್ಟು ಸೋತು ಹೋದ. ಬಳಿಕ ದುರ್ಯೋಧನ ತನ್ನ ಸಾರಥಿಯನ್ನು ದ್ರೌಪದಿಯ ಹತ್ತಿರ ಕಳಿಸಿದ. ದ್ರೌಪದಿಯು ಸಭೆಗೆ ಬರಲು ನಿರಾಕರಿಸಿದಾಗ ದುರ್ಯೋಧನನು ತನ್ನ ತಮ್ಮ ದುಃಶಾಸನನನ್ನು ಕಳಿಸಿಕೊಟ್ಟ. ಅವನು ದ್ರೌಪದಿಯನ್ನು ಕೇಶಪಾಶದಲ್ಲಿ ಹಿಡಿದು ಏಕ ವಸ್ತ್ರದಲ್ಲಿದ್ದ ಅವಳನ್ನು ಸಭೆಗೆ ಎಳೆದು ತಂದ. ದುರ್ಯೋಧನನ ಆದೇಶದಂತೆ ದುಃಶಾಸನ ಪಾಂಡವರು ನೋಡುತ್ತಿದ್ದಂತೆಯೇ ದ್ರೌಪದಿಯ ಸೀರೆ ಸೆಳೆಯತೊಡಗಿದ.

ದುಃಶಾಸನನು ಸೀರೆಯನ್ನು ಸೆಳೆಯ ತೊಡಗುತ್ತಲೇ ದ್ರೌಪದಿಯು ಅತ್ಯಂತ ಭಕ್ತಿಯಿಂದ ಶ್ರೀಕೃಷ್ಣನನ್ನು ಸ್ಮರಿಸತೊಡಗಿದಳು. ಅವನು ಸೀರೆ ಸೆಳೆಯುತ್ತಿದ್ದಂತೆಯೇ ಒಂದರ ನಂತರ ಮತ್ತೊಂದು ಕನಕ ಬಣ್ಣದ ಸೀರೆ ಕಾಣಿಸತೊಡಗಿತು.[36] ಹೀಗೆ ಶ್ರೀಕೃಷ್ಣ ಅಕ್ಷಯ ವಸ್ತ್ರ ನೀಡಿ ದ್ರೌಪದಿಯ ಮಾನರಕ್ಷಣೆ ಮಾಡಿದ.

**ಪೌಂಡ್ರಕ ಶೃಗಾಲಕೌರವ ಭೂಮಿ ಭಾರಹರ –**

ಬಲರಾಮನು ನಂದ ಗೋಕುಲಕ್ಕೆ ಹೋದ ಸಮಯದಲ್ಲಿ ಕರೂಷದೇಶದ ಮೂರ್ಖನಾದ ಪೌಂಡ್ರಕನೆಂಬ ರಾಜನು ತಾನೇ ವಾಸುದೇವನೆಂದು ಹೇಳಿಕೊಂಡು ಶ್ರೀಕೃಷ್ಣನ ಬಳಿಗೆ ದೂತನನ್ನು ಕಳಿಸಿಕೊಟ್ಟನು. ಆ ದೂತನು ರಾಜಸಭೆಗೆ ಬಂದು ತಮ್ಮ ರಾಜನ ಸಂದೇಶವನ್ನು ಹೇಳಿದನು – "ವಾಸುದೇವನೆಂಬುವನು ನಾನೊಬ್ಬನೇ. ಬೇರೆ ಯಾರೂ ಇಲ್ಲ. ನೀನು ವಾಸುದೇವನೆಂದು ಹೇಳುವದು ಸುಳ್ಳು. ಆ ಹೆಸರನ್ನು ನೀನು ಬಿಟ್ಟುಬಿಡು", ಇಲ್ಲವಾದರೆ ನನ್ನೊಡನೆ ಯುದ್ಧಮಾಡು". ಕೂಡಲೇ ಶ್ರೀಕೃಷ್ಣನು ದೂತನಿಗೆ ನೀನು ನಿಮ್ಮ ರಾಜನಿಗೆ ನಾನು ಹೇಳಿದಂತೆ ಹೇಳು ಎಂದನು. "ನಾನು ನನ್ನ ಚಿಹ್ನೆಗಳನ್ನು ನಿನ್ನ ಮೇಲೆ ಬಿಡುತ್ತೇನೆ. ಮತ್ತು ನೀನು ಯಾರ ಪ್ರೇರಣೆಯಿಂದ ಈ ಪ್ರಕಾರ ಹೇಳುತ್ತಿರುವೆಯೋ ಅವರ ಮೇಲೂ ಪ್ರಯೋಗಿಸುತ್ತೇನೆ". ಈ ಪ್ರಕಾರದ ಸಂದೇಶವನ್ನು ಹೊತ್ತು ಆ ದೂತನು ಪೌಂಡ್ರಕವಾಸುದೇವನ ಬಳಿಗೆ ಹೋಗಿ ಹೇಳಿದನು. ಕೂಡಲೇ ಪೌಂಡ್ರಕ ವಾಸುದೇವನು ಎರಡು ಅಕ್ಷೋಹಿಣೀ ಸೈನ್ಯ ತೆಗೆದುಕೊಂಡು ಹೊರಟನು ಆಗ ಅವನ ಮಿತ್ರನಾದ ಕಾಶೀ ರಾಜನು ಮೂರು ಅಕ್ಷೋಹಿಣಿ ಸೈನ್ಯ ತೆಗೆದುಕೊಂಡು ಅವನನ್ನು ಹಿಂಬಾಲಿಸಿ ಬಂದನು. ಪೌಂಡ್ರಕ ವಾಸುದೇವನು ಕೃತ್ರಿಮವಾದ

---

36. ವಿಕೃಷ್ಯಮಾಣೇ ವಸನೇ ತು ಕೃಷ್ಣಾ ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ।
ತದಾಽನ್ಯದಾಸೀದ್ವಸನಂ ಚ ತಸ್ಯಾ ದಿವ್ಯಂ ಸುಸೂಕ್ಷ್ಮಂ ಕನಕಾವದಾತಮ್ ॥
ಶ್ರೀ ಮ. ಭಾ. ತಾ. ನಿ. 21–355.

ಆಯುಧಗಳನ್ನು, ವೇಷವನ್ನು ಧರಿಸಿ ಬಂದಿದ್ದನು. ಶ್ರೀಕೃಷ್ಣನು ಪೌಂಡ್ರಕನನ್ನು ತಿರಸ್ಕರಿಸುತ್ತ ತನ್ನ ತೀಕ್ಷ್ಣವಾದ ಬಾಣಗಳಿಂದ ಅವನ ರಥಮುರಿದು ಹಾಕಿ, ಸುದರ್ಶನ ಚಕ್ರದಿಂದ ಅವನ ತಲೆಯನ್ನು ಹಾರಿಸಿ ಸಂಹಾರ ಮಾಡಿದನು.[37]

ಶೃಗಾಲವಾಸುದೇವನನ್ನು ಶ್ರೀಕೃಷ್ಣ ಸಂಹರಿಸಿದ ವೃತ್ತಾಂತ ಹೀಗಿದೆ –

ಒಂದು ದಿನ ಶ್ರೀಕೃಷ್ಣನು ಬಲರಾಮನಿಂದ ಕೂಡಿಕೊಂಡು ಗೋಮಂತಪರ್ವತವನ್ನು ನೋಡಲು ಹೊರಟನು. ಗೋಮಂತ ಪರ್ವತದಲ್ಲಿ ಜರಾಸಂಧಾದಿಗಳನ್ನು ಸೋಲಿಸಿದ ನಂತರ, ಅಹಂಕಾರದಿಂದ ತಾನೇ ವಾಸುದೇವನೆಂದು ಹೇಳಿಕೊಳ್ಳುತ್ತಿದ್ದ ಶೃಗಾಲವಾಸುದೇವನನ್ನು ಸಂಹರಿಸಿ ಅವನಲ್ಲಿದ್ದ ರಥ, ಗಜ, ಅಶ್ವಾದಿಗಳನ್ನು, ಧನ, ಕನಕಾದಿಗಳನ್ನು ಮಥುರೆಗೆ ಕಳಿಸಿ ಕೊಟ್ಟನು.

ಕೌರವನನ್ನು ಸಂಹರಿಸಿದ ವೃತ್ತಾಂತ ಹೀಗಿದೆ –

ದುರ್ಯೋಧನ ಪಾಂಡವರ ಸಂಪತ್ತನ್ನು ಕಬಳಿಸಲು ಶಕುನಿಯ ಸಹಾಯ ಪಡೆದುಕೊಂಡು ಜೂಜಾಟದಲ್ಲಿ ಸೋಲಿಸಿ ಅವರನ್ನು ವನವಾಸಕ್ಕೆ ಕಳಿಸಿದ. ಮಾತಿನಂತೆ ಪಾಂಡವರು 12 ವರ್ಷವನವಾಸ ಒಂದು ವರ್ಷ ಅಜ್ಞಾತವಾಸ ಮುಗಿಸಿ ಬಂದ ಮೇಲೆ ಪಾಂಡವರು ತಮ್ಮ ಪಾಲಿನ ರಾಜ್ಯವನ್ನು ಕೊಡುವಂತೆ ಕೇಳಲು ಸೂಜಿಯ ಮೊನೆಗೆ ಹತ್ತುವಷ್ಟು ಮಣ್ಣನ್ನು ಕೂಡ ಯುದ್ಧಮಾಡಿಯೇ ಹೊಂದಬೇಕು ಎಂದಾಗ ಶ್ರೀಕೃಷ್ಣ ಸಂಧಿಗಾಗಿ ದುರ್ಯೋಧನನ ಮನೆಗೆ ಬಂದ. ಸಂಧಿಯೂ ವಿಫಲವಾಯಿತು. ಕುರುಕ್ಷೇತ್ರದಲ್ಲಿ ಯುದ್ಧ ಮಾಡುವುದು ನಿಶ್ಚಿತವಾಯಿತು. ಯುದ್ಧದಲ್ಲಿ ಶ್ರೀಕೃಷ್ಣ ಭೀಮಸೇನನಿಂದ ದುರ್ಯೋಧನನ ಸಂಹಾರ ಮಾಡಿಸಿ ಭೂಭಾರವನ್ನು ಕಡಿಮೆ ಮಾಡಿದ.

ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರಗಳು.

**ಅಭಿಮನ್ಯುನಾತ್ಮಜನ ಬಸುರೊಳಗೆ ಸಲಹಿದೆಯೋ ॥**
**ನಾರಾಯಣಾಯ ನಮೋ ನಾರಾಯಣ ।**
**ಅಭಯದಲಿ ಪಾಂಡವರ ಸಂತತಿಯ ಬೆಳೆಸಿದೆಯೋ ॥**
**ನಾರಾಯಣಾಯ ನಮೋ ನಾರಾಯಣ ॥20॥**

ಶ್ರೀಕೃಷ್ಣನು, ಅಭಿಮನ್ಯುವಿನ ಪುತ್ರನಾದ ಪರೀಕ್ಷಿತರಾಜನು ತಾಯಿಯ ಗರ್ಭದಲ್ಲಿರುವಾಗಲೇ ಅಶ್ವತ್ಥಾಮರ ಬ್ರಹ್ಮಾಸ್ತ್ರದಿಂದ ರಕ್ಷಣೆ ನೀಡಿದನು. ಹಾಗೆಯೇ ಪಾಂಡವರಿಗೆ ಅಭಯ ನೀಡಿ ಅವರ ಸಂತತಿಯನ್ನು ಕ್ಷೇಮಕರಾಜನ ಪರ್ಯಂತ ಬೆಳೆಸಿ ರಕ್ಷಿಸಿದನು.

**ವಿವರಣೆ – ಅಭಿಮನ್ಯುನಾತ್ಮಜನ ಬಸುರೊಳಗೆ ಸಲಹಿದೆಯೋ –**

ಕುರುಕ್ಷೇತ್ರಯುದ್ಧ ಮುಗಿದ ನಂತರ ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿಸಿ ಪಾಂಡವರಿಂದ ಪ್ರತಿಯೊಬ್ಬರಿಂದಲೂ ಮೂರು ಪಟ್ಟು ದಕ್ಷಿಣೆಗಳಿಂದ ಕೂಡಿದ ವೈಭವದ

---

37. ಇತಿ ಕ್ಷಿಪ್ತ್ವಾ ಶಿತೈರ್ಬಾಣೈರ್ವಿರಥೀಕೃತ್ಯ ಪೌಂಡ್ರಕಮ್।
ಶಿರೋಽವೃಶ್ಚದ್ರಥಾಂಗೇನ ವಜ್ರೇಣೇಂದ್ರೋ ಯಥಾಗಿರೇಃ ॥ ಶ್ರೀಮದ್ ಭಾಗವತ (10–66–21)



ಅಶ್ವಮೇಧಯಾಗಗಳನ್ನು ಮಾಡಿಸಿ ಶ್ರೀಕೃಷ್ಣ ದ್ವಾರಕೆಗೆ ಹೊರಟ ಸಂದರ್ಭದಲ್ಲಿ ಉತ್ತರೆಯು ಓಡಿ ಬಂದು " ಶ್ರೀಕೃಷ್ಣ ಕಾಪಾಡು, ಕಾದ ಕಬ್ಬಿಣದ ಬಾಣವೊಂದು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದೆ. ಇದು ಬೇಕಾದರೆ ನನ್ನನ್ನು ಸುಟ್ಟು ಹಾಕಲಿ. ಆದರೆ ನನ್ನ ಗರ್ಭವನ್ನು ನಾಶ ಪಡಿಸದಿರಲಿ". ಎಂದಳು[38]

ಶ್ರೀಕೃಷ್ಣ ಒಂದು ರೂಪದಿಂದ ತಾನೇ ಗರ್ಭವನ್ನು ಪ್ರವೇಶಿಸಿ ಮಗು ಪರೀಕ್ಷಿತನ ರಕ್ಷಣೆಗೆ ನಿಂತುಬಿಟ್ಟ. ಈ ವಿಷಯವನ್ನು ಪರೀಕ್ಷಿದ್ರಾಜರು ಹೇಳುತ್ತಾರೆ. ಶ್ರೀಕೃಷ್ಣನು ತನ್ನನ್ನು ಮೊರೆಹೊಕ್ಕ ತನ್ನ ತಾಯಿಯ ಗರ್ಭವನ್ನು ಒಳಹೊಕ್ಕು ಚಕ್ರಾಯುಧವನ್ನು ಧರಿಸಿ, ಅಶ್ವತ್ಥಾಮರು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸುಟ್ಟು ಹೋಗುವುದರಲ್ಲಿದ್ದ ಕೌರವ ಪಾಂಡವ ವಂಶಗಳೆರಡರ ಬೀಜವಾಗಿದ್ದ ಈ ದೇಹವನ್ನು ಕಾಪಾಡಿದನು.[39]

**ಅಭಯದಲಿ ಪಾಂಡವರ ಸಂತತಿಯ ಬೆಳೆಸಿದೆಯೋ –**

ಅಶ್ವತ್ಥಾಮಾಚಾರ್ಯರ ಅಸ್ತ್ರದಿಂದ ಉತ್ತರೆಯು ಸತ್ತ ಮಗುವನ್ನೇ ಹೆತ್ತಳು. ಸತ್ತಿದ್ದ ಶಿಶುವನ್ನು ಕಂಡು ಕುಂತಿ ಮೊದಲಾದ ಸ್ತ್ರೀಯರು ಜಗತ್ಪತಿಯಾದ ಶ್ರೀಕೃಷ್ಣನನ್ನು ಮೊರೆಹೊಕ್ಕರು.. ಗರ್ಭದಲ್ಲಿ ಪ್ರತ್ಯಕ್ಷವಾಗಿ ತಾನೇ ಗರ್ಭವನ್ನುರಕ್ಷಿಸಿದ್ದ, ಪ್ರಸವಕಾಲದಲ್ಲಿ ಹತವಾಗಿದ್ದ ಮಗುವನ್ನು ಶ್ರೀಕೃಷ್ಣ ಪಾಂಡವರ ಸಂತತಿಯನ್ನು ಬೆಳೆಸುವ ಸಲುವಾಗಿ ತಾನೇ ಮರಳಿ ಬದುಕಿಸಿದ.[40]

ಇಂಥ ಶ್ರೀಕೃಷ್ಣ ರೂಪೀ ನಾರಾಯಣನಿಗೆ ನಮಸ್ಕಾರವು.

**ಗರುಡ ಗಂಧರ್ವ ಕಿನ್ನರ ಗೀತ ಸಂಪ್ರೀತ – ।**
**ನಾರಾಯಣಾಯ ನಮೋ ನಾರಾಯಣ**
**ಗರುವೆ ಲಕುಮಿಯ ಕೂಡ ಕ್ರೀಡಾದ್ರಿಯಲ್ಲಿರುವೆ ।**
**ನಾರಾಯಣಾಯನಮೋ ನಾರಾಯಣ ॥21॥**

ಆ ಭಗವಂತ ಗರುಡ, ಗಂಧರ್ವ, ಕಿನ್ನರರು ಮಾಡಿದ ಸ್ತೋತ್ರದಿಂದ ಸಂಪ್ರೀತನಾಗಿದ್ದಾನೆ. ಯೋಗ್ಯಳಾದ, ಪ್ರಿಯಳಾದ ಲಕ್ಷ್ಮೀದೇವಿಯ ಜೊತೆಯಲ್ಲಿ, ವೆಂಕಟಾಚಲದಲ್ಲಿ ಇರುವ ನಾರಾಯಣರೂಪಿಗೆ ನಮಸ್ಕಾರವು.

**ವಿವರಣೆ – ಗರುಡ ಗಂಧರ್ವ ಕಿನ್ನರ ಗೀತ ಸಂಪ್ರೀತ –**

**ಗರುಡೋ ಭಗವಾಂಸ್ತೋತ್ರ ಸ್ತೋಮಚ್ಛಂದೋಮಯಃ ಪ್ರಭುಃ ॥** [41]

---

38. ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾಮೇ ಗರ್ಭೋ ನಿಪಾತ್ಯತಾಮ್ ॥
ಶ್ರೀಮದ್ ಭಾಗವತ (1–8–10)

39. ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ ಸಂತಾನ ಬೀಜಂ ಕುರುಪಾಂಡವಾನಾಮ್ ।
ಜುಗೋಪ ಕುಕ್ಷಿಂ ಗತ ಆತ್ತಚಕ್ರೋ ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥ (10–1–6)

40. ಪ್ರತ್ಯಕ್ಷಮಾತ್ಮನಾ ಗರ್ಭೇ ರಕ್ಷಿತಂ ಪ್ರಸವೇ ಹತಮ್ ।
ಪುನರುಜ್ಜೀವಯಾಮಾಸ ಕೇಶವಃ ಪಾರ್ಥತಂತವೇ॥ ಶ್ರೀ ಮ. ಭಾ. ತಾ. ನಿ. (30–89)

41. ಶ್ರೀಮದ್ ಭಾಗವತ (6–8–29)



ಉಕ್ತಿಯಂತೆ ಬೃಹದ್ರಥಂತರವೇ ಮೊದಲಾದ ಸಾಮಗಾನಗಳಿಗೂ, ಸಾಮಗಾನದಿಂದ ಹಾಡುವ ಋಚೆಗಳಿಗೂ – ಬೇರೆ ವೇದ ಮಂತ್ರಗಳಿಗೂ ಅಭಿಮಾನಿ ಗರುಡನು ಹಾಡುವ ಸಾಮಗಾನದಿಂದ ಸಂಪ್ರೀತನಾಗುವವನು – ಶ್ರೀನಾರಾಯಣನು.

**ವಯಂ ವಿಭೋ ತೇ ನಟನಾಟ್ಯಗಾಯಕಾಃ ॥**[42]

ಉಕ್ತಿಯಂತೆ ಗಂಧರ್ವರು ಗಾಯನಮಾಡಿ ಶ್ರೀನಾರಾಯಣನನ್ನು ಪ್ರೀತಿಪಡಿಸುವರು –

**ವಯಮೀಶ ಕಿನ್ನರಗಣಾಸ್ತವಾನುಗಾಃ ॥**[43]

ಉಕ್ತಿಯಂತೆ ನಾರಾಯಣನ ಸೇವಕರಾದ ಕಿನ್ನರರೂ ಭಗವಂತನ ಸ್ತೋತ್ರಮಾಡಿ ಪ್ರೀತಿ ಪಡಿಸುವರು.

**ಗರುವೆ ಲಕುಮಿಯ ಕೂಡ ಕ್ರೀಡಾದ್ರಿಯಲ್ಲಿರುವೆ –**

ಪ್ರಿಯಳಾದ ರಮಾದೇವಿಯರ ಜೊತೆಯಲ್ಲಿ ಶೇಷಾಚಲದಲ್ಲಿರುತ್ತಾರೆ ಅಂತಹ ಶ್ರೀ ವೆಂಕಟೇಶ ದೇವರನ್ನು ಭಜಿಸುತ್ತೇನೆ.

**ಭಜೇ ವೆಂಕಟೇಶಂ ಫಣೀಶಾದ್ರಿವಾಸಂ**
**ಸದಾ ಮಂದಹಾಸಂ ಕ್ರಿಯಾ ಸದ್ವಿಲಾಸಮ್ ॥**[44]

ಹೀಗೆ ಲಕ್ಷ್ಮೀದೇವಿಯರ ಜೊತೆಯಲ್ಲಿ ವಿಲಾಸದಲ್ಲಿರುವ ನಾರಾಯಣನಿಗೆ ನಮಸ್ಕಾರವು.

**ಶಂಖ ಚಕ್ರಗದಾಬ್ಜ ಶ್ರೀವತ್ಸ ಶೋಭಿತನೆ –**
**ನಾರಾಯಣಾಯ ನಮೋ ನಾರಾಯಣ**
**ಸಂಖ್ಯೆ ರಹಿತಾಭರಣ ಭೂಷಣಾವ್ಯಾಕೃತನೆ**
**ನಾರಾಯಣಾಯ ನಮೋ ನಾರಾಯಣ ॥22॥**

ಆ ಭಗವಂತನು ಶಂಖ, ಚಕ್ರ, ಗದಾ, ಕಮಲ, ಶ್ರೀವತ್ಸಗಳಿಂದ ಶೋಭಿತನಾಗಿದ್ದಾನೆ. ಅಸಂಖ್ಯ ಆಭರಣಗಳಿಂದ ಭೂಷಣನೆನಿಸಿದ್ದಾನೆ. ಹಾಗೂ ಅವ್ಯಾಕೃತನೆನಿಸಿದ್ದಾನೆ.

**ವಿವರಣೆ – ಶಂಖ ಚಕ್ರ ಗದಾಬ್ಜ ಶ್ರೀವತ್ಸ ಶೋಭಿತನೆ –**

ನಾರದರು ಆ ಭಗವಂತನನ್ನು ಸ್ತೋತ್ರ ಮಾಡಿರುವುದನ್ನು ಇಲ್ಲಿ ಸ್ಮರಿಸಬೇಕು. [45]

**ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನಮಾಲಿನಮ್ ।**
**ಶಂಖ ಚಕ್ರ ಗದಾಪದ್ಮೈರಭಿವ್ಯಕ್ತಚತುರ್ಭುಜಮ್ ॥**

ಭಗವಂತನ ವಕ್ಷಸ್ಥಳದಲ್ಲಿ ಶ್ರೀವತ್ಸ ಚಿಹ್ನೆಯಿದೆ. ಶರೀರವು ನೀರು ತುಂಬಿದ ಮೋಡದಂತೆ

42. ಶ್ರೀಮದ್ ಭಾಗವತ (7–8–50)
43. ಶ್ರೀಮದ್ ಭಾಗವತ (7–8–55)
44. ಶ್ರೀ ಆದಿತ್ಯಪುರಾಣ ವೆಂಕಟೇಶ ಮಹಾತ್ಮೆ (3–39)
45. ಶ್ರೀಮದ್ ಭಾಗವತ (4–8–47)



ಶ್ಯಾಮಲವಾಗಿದೆ. ಅವನು ಕೊರಳಲ್ಲಿ ಕಮನೀಯವಾದ ವನಮಾಲೆಯನ್ನು, ನಾಲ್ಕು ಭುಜಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದಾನೆ. ಇಂಥ ನಾರಾಯನನಿಗೆ ನಮಸ್ಕಾರವು.

**ಸಂಖ್ಯೆ ರಹಿತಾಭರಣ ಭೂಷಣಾವ್ಯಾಕೃತನೆ –**

**ಸ್ಫುರದ್ವಲಯ ಕೇಯೂರ ನೂಪುರಾಂಗದ ಭೂಷಣೈಃ ।**
**ಶೋಭನೈರ್ಭೂಷಿತಾಕಾರ ಕಲ್ಯಾಣಗುಣರಾಶಯೇ ॥**[46]

ಮಂಗಲಕರವಾದ, ಹೊಳೆಯುತ್ತಿರುವ ವಲಯ, ಕೇಯೂರ, ನೂಪುರ ಇತ್ಯಾದಿ ಆಭರಣಗಳಿಂದ ಭೂಷಿತವಾದ ಮೂರ್ತಿಯೇ ಕಲ್ಯಾಣಗುಣಗಳ ರಾಶಿ ಎನಿಸಿದ ನಿನಗೆ ನಮಸ್ಕಾರವು.

ಭಗವಂತನು ಅವ್ಯಾಕೃತ ಆಕಾಶವನ್ನು ತನ್ನ ಅಧೀನದಲ್ಲಿದಲ್ಲಿಟ್ಟುಕೊಂಡವನಾದ್ದರಿಂದ ಅವನಿಗೆ ಅವ್ಯಾಕೃತನೆಂದು ಹೆಸರಿದೆ.[47]

ಇಂಥ ನಾರಾಯಣನಿಗೆ ನಮಸ್ಕಾರವು.

**ಮೀನ ಕಶ್ಯಪ ಪೋತ್ರಿ ನೃಹರಿ ವಾಮನ ಭಾರ್ಗವ**

**ನಾರಾಯಣಾಯ ನಮೋ ನಾರಾಯಣ ।**

**ಮಾನವಪ ಕೃಷ್ಣ ಬುದ್ಧ ಕಲ್ಕಿ ಕಪಿಲಾತ್ರೇಯ**

**ನಾರಾಯಣಾಯ ನಮೋ ನಾರಾಯಣ ॥23॥**

ಆ ಭಗವಂತನು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಭಾರ್ಗವ (ಪರಶುರಾಮ) ರಾಮ, ಕೃಷ್ಣ, ಬುದ್ಧ, ಕಲ್ಕಿ, ಕಪಿಲ ಮತ್ತು ದತ್ತಾತ್ರೇಯ ಅವತಾರಗಳನ್ನು ಮಾಡಿದ್ದಾನೆ.

**ವಿವರಣೆ –**

**1. ಮತ್ಸ್ಯಾವತಾರ –** ಭಗವಂತನು ಮತ್ಸ್ಯಾವತಾರ ಮಾಡಿ ಹಯಗ್ರೀವಾಸುರನನ್ನು ಸಂಹಾರವಮಾಡಿ ಬ್ರಹ್ಮದೇವರಿಗೆ ವೇದಗಳನ್ನು ತಂದುಕೊಟ್ಟನು. ಸತ್ಯವ್ರತರಾಜರಿಗೆ ತತ್ವೋಪದೇಶವನ್ನು ಮಾಡಿ ಉಪಕರಿಸಿದನು.

**2. ಕೂರ್ಮಾವತಾರ –** ಅಮೃತಮಥನ ಕಾಲದಲ್ಲಿ ಭಗವಂತನು ಮಂದರ ಪರ್ವತವನ್ನು ಧಾರಣೆ ಮಾಡಿ ದೇವತೆಗಳಿಗೆ ಅಮೃತವನ್ನು ದೊರಕಿಸಿಕೊಟ್ಟನು.

**3. ವರಾಹಾವತಾರ –** ಜಯ ವಿಜಯರು ಸನಕಾದಿ ಮುನಿಗಳ ಶಾಪದಿಂದ ಹಿರಣ್ಯಕಶಿಪು, ಹಿರಣ್ಯಾಕ್ಷರೆಂಬ ಹೆಸರಿನಿಂದ ಜನಿಸಿ ಬಂದರು. ಆದಿ ಹಿರಣ್ಯಾಕ್ಷನೇ ಈಗ ದಿತಿದೇವಿಯ ಪುತ್ರನಾಗಿ ಹಿರಣ್ಯಾಕ್ಷನೆಂಬ ಹೆಸರಿನಿಂದ ಹುಟ್ಟಿ ಬಂದನು. ಇವನಲ್ಲಿ ವಿಜಯನ ಆವೇಶವಿತ್ತು. ಈ ಹಿರಣ್ಯಾಕ್ಷನು ಭೂಮಿಯನ್ನು ನೀರಲ್ಲಿ ಮುಳುಗಿಸಿದನು. ಮುಳುಗಿಸಿದ ಭೂಮಿಯನ್ನು ಶ್ರೀ ಹರಿಯು ವರಾಹ ರೂಪವನ್ನು ತೆಗೆದುಕೊಂಡು ಮೇಲೆತ್ತುವಾಗ ಅಡ್ಡಿ ಮಾಡಲು ವರಾಹ ರೂಪಿಯು ಅವನ ಕರ್ಣಮೂಲದಲ್ಲಿ ಬರಿಗೈಯಿಂದ. ಅಪ್ಪಳಿಸಲು ಅವನು ಹತನಾಗಿ ಹೋದನು.

46. ಪಂಚರಾತ್ರೋಕ್ತ ಜಿತಂತೇ ಸ್ತೋತ್ರ (1–3)
47. ಯದಧೀನಾ ಯಸ್ಯಸತ್ತಾ ತತ್ತದಿತ್ಯೇವ ಭಣ್ಯತೇ ॥ ಭಾಗವತತಾತ್ಪರ್ಯ.

**4. ನರಸಿಂಹಾವತಾರ –** ಭಗವಂತನು ಭಗವದ್ಭಕ್ತನಾದ ಪ್ರಹ್ಲಾದನ ರಕ್ಷಣೆಗಾಗಿ ನರಸಿಂಹರೂಪವನ್ನು ಧರಿಸಿ ಅವನ ತಂದೆ ಹಿರಣ್ಯಕಶಿಪುವನ್ನು ಸಂಹರಿಸಿದನು.

**5. ವಾಮನಾವತಾರ –** ಭಗವಂತನು ಇಂದ್ರದೇವರ ಸ್ವರ್ಗಾಧಿಪತ್ಯವನ್ನು ಅವರಿಗೆ ದೊರಕಿಸಿಕೊಡಲು ವಾಮನಾವತಾರವನ್ನು ತಾಳಿ ಬಲಿರಾಜನನ್ನು ನಿಗ್ರಹಿಸಿ ಇಂದ್ರದೇವರಿಗೆ ಸ್ವರ್ಗವನ್ನು ದೊರಕಿಸಿಕೊಟ್ಟನು.

**6. ಪರಶುರಾಮಾವತಾರ –** ದುಷ್ಟಕ್ಷತ್ರಿಯರ ಸಂಹಾರಕ್ಕಾಗಿ ಭಗವಂತನು ಪರಶುರಾಮಾವತಾರವನ್ನು ಮಾಡಿ 21 ಸಾರೆ ಭೂಮಂಡಲ ಪ್ರದಕ್ಷಿಣೆ ಮಾಡುತ್ತ ಎಲ್ಲ ದುಷ್ಟರನ್ನು ಸಂಹರಿಸಿದನು. ನಂತರ ತಾನು ಸ್ವತಃ ಯಜ್ಞಗಳನ್ನು ಮಾಡಿ ಎಲ್ಲ ಭೂಮಿಯನ್ನು ದಾನ ಮಾಡಿದನು.

**7. ರಾಮಾವತಾರ –** ರಾವಣಾದಿ ರಾಕ್ಷಸರ ಉಪದ್ರವ ಹೆಚ್ಚಾಗಲು ಭಗವಂತನು ಶ್ರೀರಾಮರೂಪದಿಂದ ಅವತರಿಸಿ ರಾವಣದಿ ರಾಕ್ಷಸರನ್ನು ಸಂಹರಿಸಿ ಸಜ್ಜನರನ್ನು ರಕ್ಷಿಸಿ ಮಾನವರಿಗೆ ಶಿಕ್ಷಣ ನೀಡಿದನು.

**8. ಕೃಷ್ಣಾವತಾರ –** ಭೂದೇವಿ ಭಾರವನ್ನು ಕಡಿಮೆ ಮಾಡಲು ಭಗವಂತನು ಶ್ರೀಕೃಷ್ಣ ರೂಪದಿಂದ ಅವತರಿಸಿ ಭಗವದ್ವೇಷಿಗಳಾದ ಜರಾಸಂಧ, ಕಂಸ, ಶಿಶುಪಾಲ, ದಂತವಕ್ತ್ರರನ್ನು ಸಂಹರಿಸಿ ಸಜ್ಜನರಾದ ಪಾಂಡವರ ರಕ್ಷಣೆ ಮಾಡಿದನು.

**9. ಬುದ್ಧಾವತಾರ –** ಭಗವಂತನು ದೈತ್ಯರ ಮೋಹನಕ್ಕಾಗಿ ತಾನು ಬುದ್ಧಾವತಾರವನ್ನು ತಾಳಿ ದೇವತೆಗಳಿಗೆ ಬೋಧಿಸಿದನು.

**10. ಕಲ್ಕ್ಯಾವತಾರ –** ಭಗವಂತನು ಲೋಕಕಲ್ಯಾಣಕ್ಕಾಗಿ ತಾಮ್ರಪರ್ಣೀ ತೀರದ ಶಂಬಲಗ್ರಾಮದಲ್ಲಿ ಅವತರಿಸಿ ತಾನು ಕುದುರೆಯನ್ನೇರಿ ದುಷ್ಟ ಜನರ ಸಂಹಾರ ಮಾಡಿ ಕೃತಯುಗವನ್ನು ಪ್ರವರ್ತಿಸುವನು.

**11. ಕಪಿಲಾವತಾರ –** ಭಗವಂತನು ಕಪಿಲ ರೂಪದಿಂದ ಅವತರಿಸಿ ವೇದಾನುಸಾರಿಯಾದ ಸಾಂಖ್ಯವೆಂಬ ಶಾಸ್ತ್ರವನ್ನು ಆಸುರಿ ಎಂಬ ಶಿಷ್ಯನಿಗೆ, ಬ್ರಹ್ಮಾದಿ ದೇವತೆಗಳಿಗೆ, ಭೃಗ್ವಾದಿ ಋಷಿಗಳಿಗೆ, ತನ್ನ ತಾಯಿಗೆ ಉಪದೇಶ ಮಾಡಿದನು.

**12. ದತ್ತಾತ್ರೇಯ –** ಭಗವಂತನು ಅತ್ರಿ ಮತ್ತು ಅನಸೂಯಾ ದಂಪತಿಗಳಲ್ಲಿ ಅವತಾರ ಮಾಡಿ ಅಲರ್ಕನಿಗೆ, ಪ್ರಹ್ಲಾದರಾಜರಿಗೆ, ಮೊದಲಾದವರಿಗೆ ತರ್ಕ ಶಾಸ್ತ್ರವನ್ನು ಉಪದೇಶ ಮಾಡಿದನು.

ಇಂಥ ನಾರಾಯಣರೂಪೀ ಭಗವಂತನಿಗೆ ನಮಸ್ಕಾರವು.

**ಸ್ವಾಮಿತೀರ್ಥಾಂಬು ಅಂತರ್ಗಂಗಾಭಿಷಿಕ್ತ**
**ನಾರಾಯಣಾಯ ನಮೋ ನಾರಾಯಣ ।**



**ಸ್ವಾಮಿ ಭೂವರಾಹ ವೈಕುಂಠನಾಥ ವಿಶ್ವೇಶ**
**ನಾರಾಯಣಾಯ ನಮೋ ನಾರಾಯಣ ॥24॥**

ಆ ವೆಂಕಟೇಶ್ವರರೂಪೀ ಭಗವಂತನು ಸ್ವಾಮಿ ಪುಷ್ಕರಿಣೀ ತೀರ್ಥದ ನೀರಿನಿಂದ ಅಭಿಷೇಕ ಮಾಡಿಸಿಕೊಳ್ಳುತ್ತಾನೆ. ಇಂಥ ನಾರಾಯಣನಿಗೆ ನಮಸ್ಕಾರವು. ಆ ಭಗವಂತನು ವೆಂಕಟಗಿರಿಯಲ್ಲಿ ಭೂವರಾಹಸ್ವಾಮಿ ರೂಪದಲ್ಲಿ ಭೂವೈಕುಂಠಕ್ಕೆ ಸ್ವಾಮಿಯಾಗಿ, ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾಗಿ ಅಲ್ಲಿ ಇರುತ್ತಾನೆ. ಇಂಥ ನಾರಾಯಣನಿಗೆ ನಮಸ್ಕಾರವು.

**ವಿವರಣೆ – ಸ್ವಾಮಿ ತೀರ್ಥಾಂಬು ಅಂತರ್ಗಂಗಾಭಿಷಿಕ್ತ –**

**ಮಾಯಾವೀ ಪರಮಾನಂದಂ ತ್ಯಕ್ತ್ವಾವೈಕುಂಠಮುತ್ತಮಮ್ ।**
**ಸ್ವಾಮಿಪುಷ್ಕರಿಣೀ ತೀರೇ ರಮಯಾಸಹ ಮೋದತೇ॥**

ಆ ಭಗವಂತನು ಉತ್ತಮವಾದ ವೈಕುಂಠವನ್ನು ಬಿಟ್ಟು ಸ್ವಾಮಿ ಪುಷ್ಕರಿಣೀ ತೀರದಲ್ಲಿ ಲಕ್ಷ್ಮೀದೇವಿಯರ ಜೊತೆ ಕ್ರೀಡೆ ಮಾಡುತ್ತ ಇರುತ್ತಾನೆ.[48]

ಹಾಗೂ ಈ ಸ್ವಾಮಿಪುಷ್ಕರಿಣಿಯಲ್ಲಿರುವ ತೀರ್ಥದಿಂದ ಸ್ವಾಮಿಯು ಅಭಿಷೇಕ ಮಾಡಿಸಿಕೊಳ್ಳುತ್ತಾನೆ. ತೀರ್ಥಸ್ವಾಮಿ ಸರಃಸ್ನಾತಜನಾಭೀಷ್ಟಪ್ರದಾಯಿನೇ । ಶ್ರೀ ವರಾಹಪುರಾಣದ ಮಾತನ್ನು ಇಲ್ಲಿ ಸ್ಮರಿಸಬಹುದು.

**ಸ್ವಾಮಿಭೂವರಾಹ ವೈಕುಂಠನಾಥ ವಿಶ್ವೇಶ –**

ಆ ಭಗವಂತನಿಗೆ ಭೂವರಾಹನೆಂದು ಹೆಸರಿದೆ. ಶ್ರೀ ವರಾಹದೇವರು ಭೂದೇವಿ ಸಹಿತರಾಗಿರುವುದರಿಂದ ಆ ಸ್ವಾಮಿಗೆ ಭೂವರಾಹನೆಂದು ಕರೆಯುತ್ತಾರೆ.

**ಶ್ವೇತಂ ಸುದರ್ಶನದರಾಂಕಿತ ಬಾಹುಯುಗ್ಮಂ**
**ದಂಷ್ಟ್ರಾಕರಾಲವದನಂ ಧರಯಾ ಸಮೇತಮ್ ।**
**ಬ್ರಹ್ಮಾದಿಭಿಃ ಸುರಗಣೈಃ ಪರಿಷೇವ್ಯಮಾಣಂ**
**ಧ್ಯಾಯೇದ್ ವರಾಹ ವಪುಷಂ ನಿಗಮೈಕವೇದ್ಯಮ್ ॥**[49]

ಆ ಭಗವಂತ ವೈಕುಂಠನಾಥ ಅಂದರೆ ವೈಕುಂಠಕ್ಕೆ ಸ್ವಾಮಿಯಾಗಿದ್ದಾನೆ.

ಶ್ರೀ ವಾದಿರಾಜಪೂಜ್ಯಚರಣರು ತಮ್ಮ "ವೈಕುಂಠವರ್ಣನೆ" ಕೃತಿಯಲ್ಲಿ ಹೀಗೆ ಬಣ್ಣಿಸಿದ್ದಾರೆ.[50]

**ಪರಮಾಗತಿ ಎಂದು ವೈಕುಂಠದರಸನ**
**ಸಿರಿವರನ ಶುಕಯೋಗಿ ವರ್ಣಿಸಿದ**
**ಅರಿಕೆಯುಳ್ಳ ಬುಧರು ಅದರಿಂದೀ ಪದವನ್ನು**
**ಪರಮ ಮುಕುತಿಯೆನಬೇಕು** ॥ 1–45

48. ಬ್ರಹ್ಮಾಂಡ ಪುರಾಣ ವೆಂಕಟೇಶಸ್ತೋತ್ರ 14ನೆ ಶ್ಲೋಕ
49. ಶ್ರೀಭೂವರಾಹ ಅಷ್ಟೋತ್ತರ ಸ್ತವಃ । ಆದಿತ್ಯಪುರಾಣ ವೆಂಕಟೇಶಮಹಾತ್ಮೆ 2001 ರ ಆವೃತ್ತಿ ನೋಡಿರಿ.
50. ಶ್ರೀವೈಕುಂಠ ವರ್ಣನೆ ಸಾರಸಂಗ್ರಹ – ಸಂಪಾದಕರು ಶ್ರೀನಿವಾಸ ಸು. ಮಠದ (2007 ರಲ್ಲಿ ಪ್ರಕಟಿತ)

ಆ ವೈಕುಂಠಕ್ಕೆ ಸ್ವಾಮಿ ಲಕ್ಷ್ಮೀಪತಿಯಾದ ನಾರಾಯಣನೇ ಹೊರತು ಬೇರೊಬ್ಬರಿಲ್ಲ.

ಆ ಭಗವಂತ "ವಿಶ್ವೇಶ" ಈ ಸಮಸ್ತ ಜಗತ್ತಿಗೆ ಸ್ವಾಮಿಯಾಗಿದ್ದಾನೆ –

ಶ್ರೀಭಗವದ್ಗೀತೆಯಲ್ಲಿ ಭಗವಂತನನ್ನು ಅರ್ಜುನನು ಸ್ತೋತ್ರ ಮಾಡಿದ್ದಾನೆ.[51]

**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ – ॥**

ಇಲ್ಲಿ ವಿಶ್ವೇಶ, ವಿಶ್ವಕ್ಕೆ ಈಶ ಎಂಬುದನ್ನೇ ವಿಶ್ವೇಶ್ವರ ಎಂಬುದಾಗಿ ಸಂಬೋಧಿಸಲಾಗಿದೆ.

ಭಗವಂತನಿಗೆ ವಿಶ್ವಾತ್ಮಾ ಎಂದೂ ಹೆಸರಿದೆ[52]

**ವಿಶ್ವಸ್ಯ ಜಗತಃ ಆತ್ಮಾಸ್ವಾಮೀವಿಶ್ವಾತ್ಮಾ॥**

ಇದರಿಂದ ಭಗವಂತ ಸಮಸ್ತ ಜಗತ್ತಿಗೆ ಸ್ವಾಮಿಯೆಂಬುದು ಖಚಿತವಾಗುತ್ತದೆ.

**ಷಟ್ಕೋಟಿತೀರ್ಥಯುತ ಚರಣ ಶ್ರೀಭೂರಮಣ**
**ನಾರಾಯಣಾಯ ನಮೋ ನಾರಾಯಣ**
**ಷಟ್ಕಮಲನಿಲಯ ಚಿನ್ಮಯ ಚಿದ್ಗುಣಾರ್ಣವನೆ**
**ನಾರಾಯಣಾಯ ನಮೋ ನಾರಾಯಣ ॥25॥**

ಆ ಭಗವಂತನು ಆರು ಕೋಟಿ ತೀರ್ಥಗಳಿಂದ ಕೂಡಿದ ಪಾದವುಳ್ಳವನು, ಶ್ರೀದೇವಿ, ಭೂದೇವಿಯರಿಗೆ – ಪತಿಯಾಗಿದ್ದಾನೆ. ಇಂಥ ನಾರಾಯಣನೇ ನಿನಗೆ ನಮಸ್ಕಾರವು. ಆರು ಕಮಲಗಳಿಂದ ಕೂಡಿದ ಸ್ಥಾನದಲ್ಲಿ ಇರುವವ, ಜ್ಞಾನಮಯನು, ಜ್ಞಾನಾದಿಗುಣಗಳಿಂದ ಸಮುದ್ರದಂತೆ ಇರುವವನು ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ – ಷಟ್ಕೋಟಿತೀರ್ಥಯುತ ಚರಣ ಶ್ರೀಭೂರಮಣ –**

ಆ ಭಗವಂತ ಆರು ಕೋಟಿ ತೀರ್ಥಗಳಿಂದ ಕೂಡಿದ ಪಾದವುಳ್ಳವನು –

ಶ್ರೀ ಕೃಷ್ಣ ಅಷ್ಟೋತ್ತರ ಶತನಾಮಸ್ತೋತ್ರದಲ್ಲಿ –[53]
**ಪುಣ್ಯಶ್ಲೋಕಸ್ತ್ರೀರ್ಥಪಾದೋ ವೇದವೇದ್ಯೋ ದಯಾನಿಧಿಃ॥**

ತಿಳಿಸಿದಂತೆ ಭಗವಂತನಿಗೆ "ತೀರ್ಥಪಾದ" ಎಂದು ಕರೆದಿದ್ದಾರೆ. ಇದು ಗಮನಾರ್ಹ. ತೀರ್ಥಗಳು ಆರುಕೋಟಿ ಎಂದು ಇಲ್ಲಿ ಉಲ್ಲೇಖಿಸಲಾಗಿದೆ. ಈ ಎಲ್ಲ ತೀರ್ಥಗಳೂ ಭಗವಂತನ ಪಾದದಲ್ಲಿ ಇವೆ ಎಂದು ಭಾವಿಸಬಹುದು. ಹಾಗೂ "ಗಂಗಾದಿ ಸರ್ವತೀರ್ಥಾನಿ ತ್ವತ್ಪಾದಾಬ್ಜೇ ವಸಂತಿಹಿ" – ಈ ಮಾತನ್ನು ಇಲ್ಲಿ ಸ್ಮರಿಸಬಹುದು [54]

ಭಗವಂತ – ಶ್ರೀ ಭೂರಮಣನಾಗಿದ್ದಾನೆ.

---

51. ಶ್ರೀ ಭಗವದ್ಗೀತಾ – (11–16)
52. ಫಲಿಮಾರು ಮಠ ಉಡುಪಿ ಪ್ರಕಟಿತ ಶ್ರೀವಿಷ್ಣು ಸಹಸ್ರನಾಮ ಸಂಪುಟ – 2 ಪುಟ 123 ನೋಡಿರಿ.
53. ಶ್ರೀ ಬ್ರಹ್ಮಾಂಡ ಪುರಾಣ – ಶ್ಲೋಕ 20 ಅಷ್ಟೋತ್ತರ ಶತನಾಮ ಸ್ತೋತ್ರ ಮಂಜರೀ – ಸಂಪಾದಕ ಶ್ರೀನಿವಾಸ ಸು. ಮಠದ ಪ್ರಕಟಣೆ – 2011.
54. ಶ್ರೀ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ – (2–38)



ದೇವಶರ್ಮಬ್ರಾಹ್ಮಣನು ಭಗವಂತನನ್ನು ಕುರಿತು ಸ್ತೋತ್ರ ಮಾಡುತ್ತಾನೆ.[55]

**ಶ್ರೀಭೂಭ್ಯಾಂ ವಿಹರನ್ ವಿಷ್ಣೋ**
**ಮುಕ್ತಿಂ ಭಕ್ತಾಯ ದೇಹಿ ಮೇ ॥**

ಶ್ರೀ ಭೂದೇವಿಯರಿಂದ ಸಹಿತನಾಗಿ ವಿಹರಿಸುತ್ತಿರುವ ವಾಸುದೇವರೂಪಿಯಾದ ವಿಷ್ಣುವೇ ನನಗೆ ಮುಕ್ತಿಯನ್ನು ನೀಡು.

ಇದರಿಂದ ಶ್ರೀವೆಂಕಟೇಶನು ಶ್ರೀಭೂರಮಣನಾಗಿದ್ದಾನೆಂದು ವಿದಿತವಾಗುತ್ತದೆ.

**ಷಟ್ಕಮಲನಿಲಯ ಚಿನ್ಮಯ ಚಿದ್ಗುಣಾರ್ಣವನೆ –**

ಆ ಭಗವಂತನು ಷಟ್ಕಮಲನಿಲಯನಾಗಿದ್ದಾನೆ –

ಹೊಕ್ಕಳ ಭಾಗದಲ್ಲಿ ಆರುದಳ ರಕ್ತವರ್ಣ ಕಮಲದ ಷಟ್‌ಕೋಣ ವಾಯುಮಂಡಲದಲ್ಲಿ "ಸಂಕರ್ಷಣ" ರೂಪೀ ಭಗವಂತ ಆವಾಸವಾಗಿರುತ್ತಾನೆ. [56]

ಶ್ರೀ ಗೋಪಾಲದಾಸರು "ದಯವಿರಲಿ, ದಯವಿರಲಿ ದಾಮೋದರ" ಪದ್ಯದಲ್ಲಿ ಭಗವಂತನನ್ನು "ಚಿನ್ಮಯ" ಮೂರ್ತಿ ಎಂಬುದಾಗಿ ತಿಳಿಸಿರುವುದು ಗಮನಾರ್ಹ –

**ಎನಗೆ ಆವುದು ಒಲ್ಲೆ ಎಲ್ಲೆಲ್ಲಿ ಹೋದರು**
**ಕ್ಷಣಬಿಡದೆ ನಿನ್ನ ನೋಡುವ ಜ್ಞಾನ ಕೊಡುಸ್ವಾಮಿ ।**
**ಚಿನ್ಮಯ ಮೂರುತಿ ಗೋಪಾಲವಿಠ್ಠಲ**
**ಘನ್ನಕರುಣಿ ಮಧ್ವಮುನಿ ಮಂದಿರವಾಸ॥.**

ಶ್ರೀ ಮಾಯಾವಾದ ಖಂಡನ ಗ್ರಂಥದಲ್ಲಿ ಹೀಗೆ ವರ್ಣಿಸಿದ್ದಾರೆ.[57]

**ಜಯತ್ಯಮಿತಸಜ್ಞಾನ ಸುಖ ಶಕ್ತಿ ಪಯೋನಿಧಿಃ** ॥ ಮಂಗಲಾಚರಣ ಶ್ಲೋಕ.

ಆ ನರಸಿಂಹರೂಪೀ ಭಗವಂತನು ಯಥಾರ್ಥಜ್ಞಾನ, ಸತ್‌ಸುಖ, ಸತ್‌ಶಕ್ತಿ ಇವುಗಳಿಂದ ಸಮುದ್ರದಂತೆ ಇದ್ದಾನೆ.

**ಹಾಗೆಯೇ ಜ್ಞಾನ ವಿಜ್ಞಾನ ನಿಧಯೇ ಬ್ರಹ್ಮಣೇಽನಂತ ಶಕ್ತಯೇ** (10–16–40) ಎಂಬುದಾಗಿ ಶ್ರೀಮದ್ ಭಾಗವತದಲ್ಲಿ ತಿಳಿಸಿರುವುದು ಗಮನಾರ್ಹ.

**ಭಕ್ತಾಭಿಮಾನಿ ಭವದೂರ ಭಕ್ತರ ಪ್ರಭುವೆ**
**ನಾರಾಯಣಾಯ ನಮೋ ನಾರಾಯಣ**
**ಭಕ್ತವತ್ಸಲ ಕೃಪಾಂಬುಧಿ ಪರಾತ್ಪರ ಕೃಷ್ಣ**
**ನಾರಾಯಣಾಯ ನಮೋ ನಾರಾಯಣ ॥ 26॥**

---

55. ಶ್ರೀ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ (5–54)
56. ಬಿಂಬಾನುಸಂಧಾನ (ಪುಟ 53) ಸಂಪಾದಕರು ಎಮ್. ಎಸ್. ಆನಂದರಾವ ಬೆಂಗಳೂರು – 78
57. ದಶ ಪ್ರಕರಣ ಗ್ರಂಥಗಳು – ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು ಪ್ರಕಟಿತ – ಮಂಗಲಾಚರಣ ಶ್ಲೋಕ....

ಆ ಭಗವಂತನು ಭಕ್ತರ ಮೇಲೆ ಅಭಿಮಾನ ಮಾಡುವವನು, ಸಂಸಾರ ರಹಿತನು. ಭಕ್ತರ ಸ್ವಾಮಿಯು ಇಂಥ ನಾರಾಯಣನಿಗೆ ನಮಸ್ಕಾರವು. ಆ ಭಗವಂತ ಭಕ್ತವತ್ಸಲನು, ಕೃಪಾಸಾಗರನು. ಲಕ್ಷ್ಮೀ ಬ್ರಹ್ಮಾದಿಗಳಿಗಿಂತ ಉತ್ತಮನು, ಇಂಥ ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

**ವಿವರಣೆ** – ಭಕ್ತಾಭಿಮಾನಿ, ಭವದೂರ, ಭಕ್ತರ ಪ್ರಭುವೆ –

ಭಗವಂತ ಭಕ್ತಾಭಿಮಾನಿಯಾಗಿದ್ದಾನೆ. ಭಕ್ತರನ್ನು ಯಾವ ಕಾಲದಲ್ಲಿಯೂ ಕೈಬಿಡುವುದಿಲ್ಲ.

**ವೈಕುಂಠಂ ವಾ ಪರಿತ್ಯಕ್ಷ್ಯೇ ನ ಭಕ್ತಾಂಸ್ತ್ಯಕ್ತುಮುತ್ಸಹೇ** ॥ [58]

ಭಗವಂತ ಭವದೂರನಾಗಿದ್ದಾನೆ. ಸಂಸಾರದಿಂದ ದೂರನಾಗಿದ್ದಾನೆ.

ಶ್ರೀವಿಷ್ಣುಸಹಸ್ರನಾಮಸ್ತೋತ್ರದಲ್ಲಿ ಭಗವಂತನನ್ನು

**"ಜನ್ಮಮೃತ್ಯುಜರಾತಿಗಃ"**

ಎಂಬುದಾಗಿ ಸ್ತೋತ್ರ ಮಾಡಿದ್ದಾರೆ.

ಸಂಸಾರವೆಂದರೆ ಜನನ, ಮರಣ, ಮುಪ್ಪು ಇವುಗಳಿಂದ ಕೂಡಿದೆ.

ಇವೆಲ್ಲವುಗಳನ್ನು ದಾಟಿ ಇರುವವನು ಆ ಭಗವಂತ. ಅದಕ್ಕಾಗಿಯೇ ಅವನು ಭವದೂರ ಆಗಿದ್ದಾನೆ.

ಭಗವಂತ ಭಕ್ತರ ಪ್ರಭು ಅಂದರೆ ಭಕ್ತರಿಗೆ ಸ್ವಾಮಿ ಎನಿಸಿದ್ದಾನೆ.

**"ಭಕ್ತ್ಯೈಕವಶ್ಯಃ ಪ್ರಭುಃ"** ಎಂಬುದಾಗಿ ಶ್ರೀವಾದಿರಾಜ ಪೂಜ್ಯ ಚರಣರು ಶ್ರೀ ರು.ವಿ.ದಲ್ಲಿ (4–1) ಹೇಳಿದ ಮಾತನ್ನು ಇಲ್ಲಿ ಸ್ಮರಿಸಬೇಕು. ಆ ಭಗವಂತನು ಭಕ್ತರ ಭಕ್ತಿಗೆ ವಶನಾಗುವ ಸ್ವಾಮಿಯಾಗಿದ್ದಾನೆ.

**ಭಕ್ತವತ್ಸಲ, ಕೃಪಾಂಬುಧಿ, ಪರಾತ್ಪರಕೃಷ್ಣ**

ಭಗವಂತ ಭಕ್ತವತ್ಸಲನೆನಿಸಿದ್ದಾನೆ –

**ಪಾಲಕೋ ಹಿ ಬಹೂನಾಂಚ ಭಕ್ತಾನಾಂ ಭಕ್ತವತ್ಸಲಃ** ॥[59]

ಭಕ್ತವತ್ಸಲನಾದ ಶ್ರೀನಿವಾಸನು ಅಸಂಖ್ಯ ಭಕ್ತರನ್ನು ರಕ್ಷಿಸುತ್ತಾನೆ.

ಭಗವಂತ ಕೃಪಾಂಬುಧಿಯಾಗಿದ್ದಾನೆ – ಅಂದರೆ ಕರುಣಾಸಮುದ್ರನಾಗಿದ್ದಾನೆ.

**ಭವಾರ್ಣವೇ ನಿಮಗ್ನಂ ಮಾಂ ಅನನ್ಯ ಕರುಣೋದಧೇ** ॥ ಜಿತಂತೇ ಸ್ತೋತ್ರ.[60]

ಸಂಸಾರ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಕರುಣಾ ಸಮುದ್ರನಾದ ಭಗವಂತನೇ ರಕ್ಷಿಸು.

---

58. ಆದಿತ್ಯಪುರಾಣ ವೆಂಕಟೇಶ ಮಹಾತ್ಮೆ (2–87)
59. ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ (1–31)
60. ಪಂಚರಾತ್ರಾಗಮ – ಜಿತಂತೇಸ್ತೋತ್ರ (1–11)



ಭಗವಂತ ಪರಾತ್ಪರನಾಗಿದ್ದಾನೆ –

**ಪ್ರಪದ್ಯೇ ಪುಂಡರೀಕಾಕ್ಷಮೀಶಂ ಭಕ್ತಾನುಕಂಪಿನಮ್ ।**
**ಲೋಕೋತ್ತರಂ ಲೋಕನಾಥಂ ಪರಾತ್ಪರತರಂ ವಿಭುಮ್ ॥**

ಕಮಲದಂತಹ ಕಣ್ಣುಳ್ಳವನು, ಭಕ್ತರಲ್ಲಿ ಅನುಕಂಪವುಳ್ಳವನು, ಜ್ಞಾನದಿಂದ ಸಂಸಾರ ತಾರಕನು, ಜಗದೊಡೆಯನು, ಲಕ್ಷ್ಮೀದೇವಿಗಿಂತಲೂ ಸರ್ವಶ್ರೇಷ್ಠನು, ನಾನಾ ರೂಪಗಳನ್ನು ಧರಿಸುವವನು, ಸರ್ವತ್ರನಿಯಾಮಕನು ಆದ ಲಕ್ಷ್ಮೀಪತಿಯನ್ನು ಶರಣು ಹೊಂದುತ್ತೇನೆ[61]

**ವಸುಧೆ ವೈಕುಂಠ ಮಂದಿರವಾಸ ಶ್ರೀನಿವಾಸ**
**ನಾರಾಯಣಾಯ ನಮೋ ನಾರಾಯಣ ।**
**ವಸುಪ್ರೀತ ವಸುಕರ್ತ ವಸುದಾತ ವಸುಪೂರ್ಣ**
**ನಾರಾಯಣಾಯ ನಮೋ ನಾರಾಯಣ ॥ 27 ॥**

ಆ ಭಗವಂತ ಭೂವೈಕುಂಠವೆನಿಸಿದ ವೆಂಕಟಾಚಲದಲ್ಲಿ "ಶ್ರೀನಿವಾಸ"ನೆಂಬ ಹಸರಿನಿಂದ ವಾಸಿಸಿದ್ದಾನೆ. ಇಂಥ ನಾರಾಯಣನಿಗೆ ನಮಸ್ಕಾರವು. ಜ್ಞಾನದಿಂದ ಪ್ರೀತನಾಗುವವನು, ಜ್ಞಾನವನ್ನು ಹುಟ್ಟಿಸುವವನು, ಜ್ಞಾನವನ್ನು ಕೊಡುವವನು, ಜ್ಞಾನಪೂರ್ಣನು ಆದ ನಾರಾಯಣನಿಗೆ ನಮಸ್ಕಾರವು.

**ವಿವರಣೆ – ವಸುಧೆವೈಕುಂಠ ಮಂದಿರವಾಸ ಶ್ರೀನಿವಾಸ –**

**ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಮ್ ।**
**ಸ್ವಾಮಿಪುಷ್ಕರಿಣೀ ತೀರೇ ರಮಯಾಸಹ ಮೋದತೇ ॥** –ಬ್ರಹ್ಮಾಂಡಪುರಾಣ

ಭಗವಂತನು ವೈಕುಂಠದಲ್ಲಿ ವಾಸ ಮಾಡುವವನು. ಅವನು ಭಕ್ತರಿಗಾಗಿ ವೈಕುಂಠವನ್ನು ಬಿಟ್ಟು ಸ್ವಾಮಿ ಪುಷ್ಕರಿಣೀ ತೀರದಲ್ಲಿ ಲಕ್ಷ್ಮೀಸಹಿತನಾಗಿ ಕ್ರೀಡೆ ಮಾಡುತ್ತ ಇರುತ್ತಾನೆ. ಆದ್ದರಿಂದ ಈ ಕ್ಷೇತ್ರವು ಭೂವೈಕುಂಠವೆನಿಸಿದೆ.

ಆದಿತ್ಯ ಪುರಾಣದಲ್ಲಿ ಇದನ್ನು ತಿಳಿಸಿದ್ದಾರೆ –

**ವೈಕುಂಠವಾಸಂ ವೈಕುಂಠತ್ಯಾಗಂ ವೈಕುಂಠ ಸೋದರಮ್ ।**
**ವೈಕುಂಠದಂ ವಿಕುಂಠಾಜಂ ಶ್ರೀನಿವಾಸಂ ಭಜೇಽವಿಶಮ್ ॥** (3–17)

ವೈಕುಂಠದಲ್ಲಿ ವಾಸ ಮಾಡುವವನು, ಭಕ್ತರಿಗಾಗಿ ವೈಕುಂಠವನ್ನು ತ್ಯಾಗ ಮಾಡಿದವನು, ವೈಕುಂಠ ಎಂಬ ಅನುಜನುಳ್ಳವನು, ಭಕ್ತರಿಗೆ ವೈಕುಂಠವನ್ನು ಕೊಡುವವನು, ವಿಕುಂಠಾ ದೇವಿಯಲ್ಲಿ ಅವತರಿಸಿದವನು. ಇಂತಹ ಶ್ರೀನಿವಾಸನನ್ನು ಸರ್ವದಾ ಸೇವಿಸುವೆನು.

**ವಸುಪ್ರೀತ ವಸುಕರ್ತ ವಸುದಾತ ವಸುಪೂರ್ಣ –**

1. ವಸು ಎಂದರೆ ಜ್ಞಾನ, ಸಂಪತ್ತು, ಜ್ಞಾನದಿಂದ ಪ್ರೀತನಾಗುವವನು ಆ ಭಗವಂತ ಆದ್ದರಿಂದ ವಸುಪ್ರೀತ – ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮಪ್ರಿಯಃ ॥ [61]

61. ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ – (3–56)



ನಾನೆಂದರೆ ಜ್ಞಾನಿಗೆ ಬಲುಪ್ರಿಯನು, ನನಗೂ ಅವನು ಬಲು ಪ್ರಿಯ.

**ಜ್ಞಾನೀ ತ್ವಾತ್ಮೈವ ಮೇ ಮತಮ್ ॥** [62]
ತತ್ವಜ್ಞಾನಿಯು ಮಾತ್ರ ನನಗೆ ಅತ್ಯಂತಪ್ರಿಯ.

2. ಆ ವ್ಯಾಸರೂಪೀ ಭಗವಂತ ಜ್ಞಾನವನ್ನು ಬ್ರಹ್ಮಸೂತ್ರ, ಮಹಾಭಾರತ, ಪುರಾಣಾದಿಗಳ ಮೂಲಕ ಹುಟ್ಟಿಸುವವನು.

**ಸೂತ್ರೇಷು ಯೇಷು ಸರ್ವೇಽಪಿ ನಿರ್ಣಯಾಸ್ಸಮುದೀರಿತಾಃ ।**
**ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ ।**
**ಏವಂ ವಿಧಾನಿ ಸೂತ್ರಾಣಿ ಕೃತ್ವಾ ವ್ಯಾಸೋ ಮಹಾಶಯಾಃ ।**
**ಬ್ರಹ್ಮರುದ್ರಾದಿದೇವೇಷು ಮನುಷ್ಯಪಿತೃ ಪಕ್ಷಿಷು ।**
**ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ ಪುರುಷೋತ್ತಮಃ ॥** [63]
**ವಿವ್ಯಾಸ ವೇದಾನ್ ಚಕ್ರೇ ಚ ಭಾರತಂ ವೇದ ಸಂಹಿತಮ್ ॥**

3. ಆ ಭಗವಂತ ಜ್ಞಾನಪ್ರದನಾಗಿದ್ದಾನೆ – **ಅಜ್ಞಾನಾಂ ಜ್ಞಾನದೋ ವಿಷ್ಣುಃ ॥.** ಹಾಗೂ

**ಜ್ಞಾನಪ್ರದಃ ಸ ಭಗವಾನ್ ಕಮಲಾವಿರಿಂಚಿ**
**ಶರ್ವಾದಿ ಪೂರ್ವಜಗತೋ ನಿಖಿಲಾದ್ವರಿಷ್ಠಃ ॥**[64]

4. ಆ ಭಗವಂತ ಜ್ಞಾನಪೂರ್ಣನಾಗಿದ್ದಾನೆ.

**ಅನಂತವೇದ ಸಂವೇದ್ಯ ಲಕ್ಷ್ಮೀನಾಥಾಂಡಕಾರಣ.**
**ಜ್ಞಾನಾನಂದೈಶ್ವರ್ಯ ಪೂರ್ಣ ನಮಸ್ತೇ ಕರುಣಾಕರ ॥**[65]

**ಆದಿನಾಥಪ್ರಮೇಯಾದಿ ಪುರುಷೋತ್ತಮನೆ**
**ನಾರಾಯಣಾಯ ನಮೋ ನಾರಾಯಣ ।**
**ಆದಿ ಮಧ್ಯಾಂತ ರಹಿತಾದ್ಯಮೂರುತಿ ವಿಷ್ಣು**
**ನಾರಾಯಣಾಯ ನಮೋ ನಾರಾಯಣ ॥28॥**

ಆ ಭಗವಂತ ಅನಾದಿಕಾಲದಿಂದ ಸ್ವಾಮಿಯು, ಅಪ್ರಮೇಯನು ಅಂದರೆ ಸಾಕಲ್ಯೇನ ತಿಳಿಯಲು ಅಶಕ್ಯನು, ಆದಿಯು, ಕ್ಷರಾಕ್ಷರ ಪುರುಷರಿಗಿಂತ ಉತ್ತಮನು. ಇಂಥ ನಾರಾಯಣನಿಗೆ ನಮಸ್ಕಾರವು. ಆ ಭಗವಂತ ಆದಿ, ಮಧ್ಯ, ಅಂತ ರಹಿತನು, ಆದ್ಯ ಮೂರುತಿ ವಿಷ್ಣುವು. ಇಂಥ ನಾರಾಯಣನಿಗೆ ನಮಸ್ಕಾರವು.

---

62. ಶ್ರೀಭಗವದ್ಗೀತಾ (7–18)
63. ಶ್ರೀ ಬ್ರಹ್ಮಸೂತ್ರ ಭಾಷ್ಯ (1–1–1)
64. ಶ್ರೀಮಹಾಭಾರತ ತಾತ್ಪರ್ಯನಿರ್ಣಯ (2–59)
65. ಶ್ರೀ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ (3–1)



**ವಿವರಣೆ – ಆದಿನಾಥಪ್ರಮೇಯಾದಿ ಪುರುಷೋತ್ತಮನೆ**

ಆ ಭಗವಂತ ಆದಿನಾಥ ಅಂದರೆ ಸರ್ವಸ್ವಾಮಿಯು.

ಆದೀಯತೇ ಅನೇಕ ಸರ್ವಂ ಆತ್ಮೀಯತಯಾ ಇತಿ ಆದಿಃ ಸರ್ವಸ್ವಾಮಿ ಇತ್ಯರ್ಥ [66]

ಆ ಭಗವಂತ ಅಪ್ರಮೇಯನು – ಸಾಕಲ್ಯೇನ ತಿಳಿಯಲು ಅಶಕ್ಯನು.

**ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ ।**
**ಪ್ರಕರ್ಷೇಣ ಮೇಯೋ ನ ಭವತೀತಿ ಅಪ್ರಮೇಯಃ ।**[67]

ಭಗವದ್ಗೀತೆಯಲ್ಲಿ ಭಗವಂತನನ್ನು "ಅಪ್ರಮೇಯ" ಎಂಬುದಾಗಿ ಕರೆದಿದ್ದಾರೆ.[68]

**1. ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್ ದೀಪ್ತಾನಲಾರ್ಕ ದ್ಯುತಿಮಪ್ರಮೇಯಮ್ ॥**
**2. ಏಕೋಽಥವಾ ಪ್ಯಚ್ಯುತ ತತ್ಸಮಕ್ಷಂ ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥**

**3. ಆಸೀದುದಾರಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ಸ ಏಕಃ ।** [69]
(ಸಾಕಲ್ಯೇನ ಪ್ರಮಾತುಂ ಕೇನಾಪಿ ನ ಶಕ್ಯತ ಇತ್ಯರ್ಥಃ)

ಭಗವಂತನು ಪುರುಷೋತ್ತಮನಾಗಿದ್ದಾನೆ –

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

ಭಗವಂತ ಹೇಳುತ್ತಾನೆ – ನಾನು ಬ್ರಹ್ಮಾದಿ ಕ್ಷರರನ್ನು ಮೀರಿದವನು. ಅಕ್ಷರಳೆನಿಸಿದ ಲಕ್ಷ್ಮೀದೇವಿಗಿಂತಲೂ ಉತ್ತಮ. ಆದ್ದರಿಂದ ಶ್ರುತಿಯಲ್ಲಿಯೂ, ಸ್ಮೃತಿಯಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾದವನು ನಾನೇ[70]

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥**

ಯಾರು ನನ್ನನ್ನು ಕ್ಷರ ಮತ್ತು ಅಕ್ಷರ ಪುರುಷರಿಗಿಂತ ಉತ್ತಮನೆಂದು, ಶ್ರುತಿ, ಸ್ಮೃತಿಗಳಲ್ಲಿ ಪ್ರಸಿದ್ಧನೆಂದು ಮಿಥ್ಯಾಜ್ಞಾನ ರಹಿತನಾಗಿ ಪುರುಷೋತ್ತನೆಂದು ತಿಳಿಯುವನೋ ಅವನು ಸರ್ವಶಾಸ್ತ್ರಗಳ ಸಾರವನ್ನು ತಿಳಿದವನೆನಿಸಿ ಎಲ್ಲ ಬಗೆಯಿಂದ ನನ್ನನ್ನು ಭಜಿಸುತ್ತಾನೆ. [71]

---

66. ಶ್ರೀವಿಷ್ಣುಸಹಸ್ರನಾಮ ವ್ಯಾಖ್ಯಾನ – ಸಂ. 3, ಪುಟ 334, (ಶ್ರೀಪಲಿಮಾರು ಮಠ ಉಡುಪಿ ಪ್ರಕಟಿತ)
67. ಶ್ರೀವಿಷ್ಣುಸಹಸ್ರನಾಮ ವ್ಯಾಖ್ಯಾನ – ಸಂ. 1, ಪುಟ 155 (ಶ್ರೀಪಲಿಮಾರು ಮಠ ಉಡುಪಿ ಪ್ರಕಟಿತ)
68. ಶ್ರೀ ಭಗವದ್ಗೀತಾ .... 11–17, 11–42
69. ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯ – (1–2) ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು ಪ್ರಕಟಿತ.
70. ಶ್ರೀಭಗವದ್ಗೀತಾ – (15–18)
71. ಶ್ರೀಭಗವದ್ಗೀತಾ – (15–19)

ಭಗವಂತ ಆದಿಮಧ್ಯಾಂತ ರಹಿತನಾಗಿದ್ದಾನೆ.

**ಅನಾದಿ ಮಧ್ಯಾಂತಮನಂತವೀರ್ಯಂ ಅನಂತಬಾಹುಂ ಶಶಿಸೂರ್ಯನೇತ್ರಮ್ ॥** [72]

ಅರ್ಜುನ ಹೇಳುತ್ತಾನೆ – ಭಗವಂತ! ನೀನು ಆದಿ, ಮಧ್ಯ, ಅಂತಗಳಿಲ್ಲದವನು, ಅನಂತ ಬಾಹುಗಳುಳ್ಳವನು, ಸೂರ್ಯ, ಚಂದ್ರರನ್ನು ಕಣ್ಣುಗಳಲ್ಲಿ ಉಳ್ಳವನು.

ಆದ್ಯಮೂರೂತಿ – ವಿಷ್ಣುವು ತನಗೆ ತಾನೇ ಭೋಗ್ಯನಾದ್ದರಿಂದ ಮತ್ತು ಇತರರಿಗೆ ಉಪಜೀವ್ಯನಾದ್ದರಿಂದ "ಆದ್ಯ" ಮೂರುತಿ ಎನಿಸಿದ್ದಾನೆ. ಐ.ಉ. ಭಾಷ್ಯ (1–3–5)

ಆ ಭಗವಂತನು ಎಲ್ಲವನ್ನೂ ಪ್ರವೇಶಿಸಿರುವನಾದ್ದರಿಂದ ಅವನಿಗೆ "ವಿಷ್ಣು" ಎಂದು ಹೆಸರು[73] **ಸರ್ವಂ ವಿಶತೀತಿ ವಿಷ್ಣುಃ ॥** ವಿಶ ಪ್ರವೇಶನೇ ಧಾತುವಿನಿಂದ ಸಿದ್ಧವಾಗಿದೆ.

**ಬದುಕಿಪ್ಯಾದರೆ ನಿನ್ನ ಹೊಗಳಿಕೆಲಿ ಬದುಕಿಸೈ**
**ನಾರಾಯಣಾಯ ನಮೋ ನಾರಾಯಣ**
**ಬುಧರ ಸಂಗತಿ ಕೊಟ್ಟು ಮನ್ನಿಸೆನ್ನನು ತಂದೆ**
**ನಾರಾಯಣಾಯ ನಮೋ ನಾರಾಯಣ ॥29॥**

ಭಗವಂತನೇ! ನನ್ನನ್ನು ಬದುಕಿಸುವುದಾದರೆ ನಿನ್ನನ್ನು ಕೊಂಡಾಡುತ್ತ, ಕೀರ್ತನೆ ಮಾಡುತ್ತ ಬದುಕುವಂತೆ ಮಾಡು. ನಾರಾಯಣನೇ ನಿನಗೆ ನಮಸ್ಕಾರವು. ನನಗೆ ಜ್ಞಾನಿಗಳ ಸಂಗವನ್ನು ಕೊಟ್ಟು ಉದ್ಧರಿಸು ತಂದೆಯೇ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ – ಬದುಕಿಪ್ಯಾದರೆ ನಿನ್ನ ಹೊಗಳಿಕೆಲಿ ಬದುಕಿಸೈ.**

ನಾರಾಯಣನೇ! ನನ್ನನ್ನು ಬದುಕಿಸುವುದಾದರೆ ನಿನ್ನನ್ನು ಕೊಂಡಾಡುತ್ತ, ಕೀರ್ತನೆ ಮಾಡುತ್ತ ಬದುಕುವಂತೆ ಮಾಡು ಎಂದು ಹೇಳುತ್ತಿದ್ದಾರೆ ಶ್ರೀದಾಸರು. ಇದಕ್ಕೆ ಕಾರಣ ಹೀಗಿದೆ –

ಭಗವಂತನನ್ನು ಕೊಂಡಾಡುತ್ತ, ಕೀರ್ತನೆ ಮಾಡುತ್ತ ಬದುಕಿದ ಬದುಕೇ ಸಾರ್ಥಕ. ಇದನ್ನು ಶ್ರೀ ಮಧ್ವಾಚಾರ್ಯರು ಹೀಗೆ ತಿಳಿಸಿಕೊಟ್ಟಿದ್ದಾರೆ –

**ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಸಹಸ್ರಕಮ್ ।**
**ಫಲಂ ಪ್ರಾಪ್ನೋತ್ಯವಿಕಲಂ ಕಲೌ ಸಂಕೀರ್ತ್ಯ ಕೇಶವಮ್ ॥**[74]

ಕೃತಯುಗದಲ್ಲಿ ಶ್ರೀಹರಿಯನ್ನು ಭಕ್ತಿಯಿಂದ ಸಾವಿರ ಕಾಲ ಪೂಜಿಸಿದಾಗ ಲಭಿಸುವ ಫಲ ಕಲಿಯುಗದಲ್ಲಿ ಶ್ರೀಹರಿಯನ್ನು ಕೀರ್ತನೆ ಮಾಡುವುದರಿಂದ ಲಭಿಸುತ್ತದೆ.

72. ಶ್ರೀಭಗವದ್ಗೀತಾ – (11–19)
73. ಶ್ರೀವಿಷ್ಣುಸಹಸ್ರನಾಮ – 258 ನೆ ನಾಮ – ಸಂ. 2, ಪುಟ 272 (ಶ್ರೀ ಪಲಿಮಾರು ಮಠ ಉಡುಪಿ ಪ್ರಕಟಿತ.
74. ಶ್ರೀಕೃಷ್ಣಾಮೃತ ಮಹಾರ್ಣವ – 61 ನೆ ಶ್ಲೋಕ (ಡಾ. ಪ್ರಭಂಜನಾಚಾರ್ಯ ಅವರಿಂದ ಪ್ರಕಟಿತ)



**ಆರ್ತಾವಿಷಣ್ಣಾಃ ಶಿಥಿಲಾಶ್ಚ ಭೀತಾ**
**ಘೋರೇಷು ಚ ವ್ಯಾಧಿಷು ವರ್ತಮಾನಾಃ ।**
**ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ**
**ವಿಮುಕ್ತ ದುಃಖಾಃ ಸುಖಿನೋ ಭವಂತಿ ॥** [75]

ಆರ್ತರು (ದುಃಖಿತರು) ವಿಷಣ್ಣರು (ನಿರಾಶೆಹೊಂದಿದ), ವೃದ್ಧರು, ಭಯಗೊಂಡವರು, ಘೋರವ್ಯಾಧಿಗಳಿಂದ ನರಳುವವರು, ನಾರಾಯಣ ಎಂಬ ಶಬ್ದವನ್ನು ಚೆನ್ನಾಗಿ ಕೀರ್ತನೆ ಮಾಡಿ ಸಮಸ್ತ ದುಃಖಗಳಿಂದ ಬಿಡುಗಡೆ ಹೊಂದಿ ಸುಖಿಗಳಾಗುತ್ತಾರೆ.

**ಬುದ್ಧ್ವಾ ಬುಧ್ವಾ ವದಸ್ವೈನಂ ಹರಿರಿತ್ಯಕ್ಷರದ್ವಯಮ್ ।**
**ಸ್ಮರಣಾತ್ ಕೀರ್ತನಾದ್ಯಸ್ಯ ನ ಪುನರ್ಜಾಯತೇಕ್ವಚಿತ್ ।** [76]

ಹರಿ ಎಂಬ ಎರಡು ಅಕ್ಷರಗಳನ್ನು ಬುದ್ಧಿಯಿಂದ ಚೆನ್ನಾಗಿ ತಿಳಿದು ಉಚ್ಚರಿಸು. ಅವನ ಸ್ಮರಣೆ ಮತ್ತು ಕೀರ್ತನೆ ಮಾಡುವುದರಿಂದ ಮತ್ತೊಮ್ಮೆ ಭೂಮಿಯಲ್ಲಿ ಜನಿಸಲಾರನು. ಇದೇ ಜೀವನದ ಸಾರ್ಥಕತೆ.

**ಬುಧರ ಸಂಗತಿ ಕೊಟ್ಟು ಮನ್ನಿಸೆನ್ನನು ತಂದೆ –**

ಆ ಭಗವಂತನು ಎಲ್ಲರಿಗೂ ತಂದೆ ಎನಿಸಿದ್ದಾನೆ –

**ಅರ್ಜುನ ಹೇಳುತ್ತಾನೆ – ಪಿತಾಸಿಲೋಕಸ್ಯ ಚರಾಚರಸ್ಯ** [77]

ಭಗವಂತ ! ನೀನು ಚರಾಚರ ಪ್ರಪಂಚಕ್ಕೆ ತಂದೆ ಎನಿಸಿರುವಿ.

ನನಗೆ ಜ್ಞಾನಿಗಳ ಸಂಗವನ್ನು ಕೊಟ್ಟು ಉದ್ಧರಿಸು – ಜ್ಞಾನಿಗಳ ಸಂಗ ಜೀವನದಲ್ಲಿ ಅವಶ್ಯವಾಗಿದೆ.

**ದೇಹಿ ಸದಾ ಸಜ್ಜನಾನಾಂ ಚ ಸಂಗಂ ।**
**ದಗ್ಧಂ ಕುರು ದುರ್ಜನಾನಾಂ ಚ ಸಂಗಂ ॥** [78]

ಭಗವಂತನೇ ಎಲ್ಲ ಕಾಲದಲ್ಲಿ ಸಜ್ಜನರ ಸಂಗ ಕೊಡು. ದುರ್ಜನರ ಸಂಗವನ್ನು ನಾಶಮಾಡು

**ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಂ ।**
**ಯಸ್ಮಾದವಾಪ್ಯತೇ ಸರ್ವಂ ಪುರುಷಾರ್ಥ ಚತುಷ್ಟಯಮ್ ॥** [79]

ಈ ಸಂಸಾರದಲ್ಲಿ ಅರೆಕ್ಷಣವಾದರೂ ಸಜ್ಜನ ಸಂಗ ದೊರಕಿದರೆ ಅದು ಒಂದು ದೊಡ್ಡ ನಿಧಿ ಇದ್ದಂತೆ. ಏಕೆಂದರೆ – ಅದರಿಂದ ಎಲ್ಲ ನಾಲ್ಕು ಪುರುಷಾರ್ಥಗಳು ಲಭಿಸುತ್ತವೆ.

---

75. ಶ್ರೀಕೃಷ್ಣಾಮೃತ ಮಹಾರ್ಣವ – 65 ನೆ ಶ್ಲೋಕ (ಡಾ. ಪ್ರಭಂಜನಾಚಾರ್ಯ ಅವರಿಂದ ಪ್ರಕಟಿತ)
76. ಶ್ರೀಕೃಷ್ಣಾಮೃತ ಮಹಾರ್ಣವ – 69 ನೆ ಶ್ಲೋಕ (ಡಾ. ಪ್ರಭಂಜನಾಚಾರ್ಯ ಅವರಿಂದ ಪ್ರಕಟಿತ)
77. ಶ್ರೀಭಗವದ್ಗೀತಾ – (11–43)
78. ಗರುಡಪುರಾಣ ವಚನ
79. ಶ್ರೀಮದ್ ಭಾಗವತ (11–2–30), ಶ್ರೀಪದ್ಮ ಮಹಾಪುರಾಣ



**ಕಿವಿಯಲ್ಲಿ ಮುಖದಲ್ಲಿ ನಿನ್ನ ನಾಮದ ನೆನೆವು**
**ನಾರಾಯಣಾಯ ನಮೋ ನಾರಾಯಣ ।**
**ಕವಲಾಗದಂತಿರಿಸಿ ತವ ಪಾದಾಬ್ಜವ ತೋರೋ**
**ನಾರಾಯಣಾಯ ನಮೋ ನಾರಾಯಣ ॥30॥**

ಹೇ ಭಗವಂತ ! ಕಿವಿಯು ನಿನ್ನ ನಾಮ ಕೇಳುತ್ತಿರಬೇಕು, ಮುಖವು (ನಾಲಿಗೆಯು) ನಿನ್ನ ನಾಮ ನುಡಿಯುತ್ತಿರಬೇಕು. ನಿನ್ನ ನಾಮದ ನೆನಪು ಬೇರೆ ಕಡೆಗೆ ಹೋಗದಂತೆ ಮಾಡಿ ನಿನ್ನ ಪಾದಕಮಲವನ್ನು ತೋರಿಸು. ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ – ಕಿವಿಯಲ್ಲಿ ಮುಖದಲ್ಲಿ ನಿನ್ನ ನಾಮದ ನೆನೆವು –**

ಶ್ರೀಮದ್‌ಭಾಗವತದಲ್ಲಿ ಶ್ರೀಕೃಷ್ಣನ ಭಕ್ತರಾದ ನಲಕೂಬರ, ಮಣಿಗ್ರೀವರು – ಮಾಡಿದ ಪ್ರಾರ್ಥನೆಯನ್ನು ಇಲ್ಲಿ ಸ್ಮರಿಸಬಹುದು.

**ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ**
**ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನೌ।**
**ಸ್ಮೃತ್ಯಾಂ ಶಿರಸ್ತವ ಸುರ ಪ್ರವರಪ್ರಣಾಮೇ**
**ದೃಷ್ಟಿಃ ಸತಾಂ ದರ್ಶನೇऽಸ್ತು ಭವತ್ತನೂನಾಂ ॥** [80]

ಶ್ರೀ ಕೃಷ್ಣ ! ನಿನ್ನ ಗುಣಗಾನ ಮಾಡುವುದರಲ್ಲಿ ನಮ್ಮ ಮುಖವು ಇರಲಿ. ಕಿವಿಗಳು ನಿನ್ನ ನಾಮ, ಕಥಾಶ್ರವಣದಲ್ಲಿ ಇರಲಿ. ನಿನ್ನ ಮಂದಿರಮಾರ್ಜನಾದಿ ಕ್ರಿಯೆಗಳಲ್ಲಿ ನಮ್ಮ ಕೈಗಳೆರಡು ಇರಲಿ, ಮನಸ್ಸು ನಿನ್ನ ಪಾದಗಳ ಸ್ಮರಣೆಯಲ್ಲಿ ಇರಲಿ. ನಮ್ಮ ತಲೆಯು ನಿನಗೆ ನಮಸ್ಕಾರ ಮಾಡುವುದರಲ್ಲಿ ತೊಡಗಲಿ. ಕಣ್ಣುಗಳು ನಿರ್ದುಷ್ಟವಾದ ನಿನ್ನ ಮೂರ್ತಿಗಳ ದರ್ಶನ ಮಾಡುವಲ್ಲಿ ನಿರತವಾಗಿರಲಿ. ನಿನ್ನ ಪ್ರತಿಮಾರೂಪರಾದ ಸಜ್ಜನರನ್ನು ನೋಡುವಲ್ಲಿ ನಮ್ಮ ದೃಷ್ಟಿಯು ಇರಲಿ.

ಪ್ರತಿಯೊಬ್ಬ ಮನುಷ್ಯನ ಬಾಯಲ್ಲಿ ಭಗವಂತನ ನಾಮ ಇರಬೇಕು ಅದರ ಮಹತ್ವವನ್ನು ಶ್ರೀ ಮಧ್ವರು ಹೀಗೆ ತಿಳಿಸಿದ್ದಾರೆ.

**ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।**
**ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋऽಚ್ಯುತಃ ॥** [81]

ಹೃದಯದಲ್ಲಿ ಶ್ರೀಹರಿಯ ರೂಪ, ಬಾಯಲ್ಲಿ ಅವನ ನಾಮ, ಉದರದಲ್ಲಿ ಅವನ ನೈವೇದ್ಯ ಶಿರಸ್ಸಿನಲ್ಲಿ ಅವನ ಪಾದೋದಕ ಹಾಗೂ ನಿರ್ಮಾಲ್ಯಗಳನ್ನು ಯಾವನು ಧರಿಸುವನೋ ಅವನು ಚ್ಯುತಿರಹಿತನಾಗುತ್ತಾನೆ.

ಶ್ರೀಹರಿಯ ನಾಮಕೀರ್ತನೆಯಿಂದ ಸಕಲಪಾಪಗಳ ಪರಿಹಾರವೆಂದು ತಿಳಿಸಿದ್ದಾರೆ.

80. ಶ್ರೀಮದ್ ಭಾಗವತ (10–10–38)
81. ಶ್ರೀಕೃಷ್ಣಾಮೃತ ಮಹಾರ್ಣವ – 43 ನೇ ಶ್ಲೋಕ



**ಯನ್ನಾಮಕೀರ್ತನಂ ಭಕ್ತ್ಯಾ ವಿಲಾಪನಮನುತ್ತಮಮ್।**
**ಮೈತ್ರೇಯಾಶೇಷಪಾಪಾನಾಂ ಧಾತೂನಾಮಿವ ಪಾವಕಃ ॥** [82]

ಮೈತ್ರೇಯನೇ! ಭಕ್ತಿಯಿಂದ ಮಾಡಿದ ಶ್ರೀಹರಿಯ ನಾಮಕೀರ್ತನೆ, ನಾಮೋಚ್ಚಾರಣೆಯು ಸಕಲ ಪಾಪಗಳಿಗೂ, ಲೋಹಗಳಿಗೆ ಅಗ್ನಿಯು ಹೇಗೋ ಹಾಗೆ ದಾಹಕವಾಗಿದೆ.

ಶ್ರೀಹರಿನಾಮ ಕೀರ್ತನೆ ಮಾಡುವುದು ಜಿಹ್ವೆಗೆ ಸಾರ್ಥಕ್ಯವನ್ನು ತಂದು ಕೊಡುತ್ತದೆ ಅಷ್ಟೇ ಅಲ್ಲ ಸಂಸಾರದಿಂದ ಪಾರುಮಾಡುತ್ತದೆ.

**ಹೇ ಜಿಹ್ವೇ ಮಮ ನಿಸ್ನೇಹೇ ಹರಿಂ ಕಿಂ ನು ನ ಭಾಷಸೇ।**
**ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿನೌರ್ಹರಿಃ ॥** [83]

ಸ್ನೇಹರಹಿತಳಾದ ಹೇ ನಾಲಿಗೆಯೇ ! ನೀನೇಕೆ ಹರಿನಾಮ ಅನ್ನುತ್ತಿಲ್ಲ ನೀನು ಹರಿ ಎಂದು ನುಡಿ ಅವನು ಸಂಸಾರ ಸಾಗರಕ್ಕೆ ನೌಕೆಯಂತೆ ಇದ್ದಾನೆ.

ಶ್ರೀಕೃಷ್ಣನ ನಾಮ ನುಡಿಯುವದು ಪರಮಾನಂದಕ್ಕೆ ಕಾರಣವೆಂದು ಹೀಗೆ ತಿಳಿಸಿದ್ದಾರೆ.
**ಕೃಷ್ಣನಾಮಾಮೃತಂ ನಾಮ ಪರಮಾನಂದಕಾರಣಮ್ ॥** [84]

ಭಗವಂತನ ನಾಮಸ್ಮರಣೆ ಬೇರೆ ಕಡೆ ಹೋಗದೇ (ವಿಷಯಗಳಲ್ಲಿ ಹೋಗದೇ) ಇರುವಂತಾದರೆ ಆ – ಭಗವಂತನ ಪಾದಕಮಲಗಳನ್ನು ತೋರಿಸುವದರಲ್ಲಿ ಸಮರ್ಥ ವಾಗುತ್ತದೆಂದು ಶ್ರೀ ದಾಸರುಇಲ್ಲಿ ತಿಳಿಸಿದ್ದಾರೆ.

**ಯನ್ನಾಮಧೇಯ ಶ್ರವಣಾನುಕೀರ್ತನಾದ್**
**ಯತ್ ಪ್ರಹ್ವಣಾದ್ ಯತ್ ಸ್ಮರಣಾದಪಿಕ್ವಚಿತ್ ।**
**ಶ್ವಾದೋऽಪಿ ಸದ್ಯಃ ಸವನಾಯ ಕಲ್ಪತೇ ॥** (3–34–6)

ಭಗವಂತನ ನಾಮ ಮಹಾತ್ಮೆಯನ್ನು ಇಲ್ಲಿ ತಿಳಿಸಿದ್ದಾರೆ – ಯಾವನ ನಾಮವನ್ನು ಕೇಳುವುದರಿಂದ, ನುಡಿಯುವುದರಿಂದ, ಯಾವನಿಗೆ ನಮ್ರನಾಗುವುದರಿಂದ, ಯಾವನ ಸ್ಮರಣೆಯಿಂದ ನಾಯಿ ತಿನ್ನುವ ಚಂಡಾಲನೂ ಸಹ ತತ್ ಕ್ಷಣದಲ್ಲಿ ಯಜ್ಞ ಮಾಡಲು ಸಮರ್ಥನಾಗುವನು. ಪವಿತ್ರನಾಗಿ ಪೂಜ್ಯನಾಗುವನು. ಇಂಥ ನಾರಾಯಣನಿಗೆ ನಮಸ್ಕಾರವು.

**ಭವಭವದಿ ತೊಳತೊಳಲಿ ಬಳಬಳಲಿ ಬಲುದಣಿದೆ**
**ನಾರಾಯಣಾಯ ನಮೋ ನಾರಾಯಣ ।**
**ಭವ ವಿರಿಂಚ್ಯಾದಿ ಕರಿಗಭಯದನೆ ನೀ ಸಲಹು**
**ನಾರಾಯಣಾಯ ನಮೋ ನಾರಾಯಣ ॥ 31 ॥**

---

82. ಶ್ರೀಕೃಷ್ಣಾಮೃತ ಮಹಾರ್ಣವ – 57 ನೇ ಶ್ಲೋಕ
83. ಶ್ರೀಕೃಷ್ಣಾಮೃತ ಮಹಾರ್ಣವ – 70 ನೇ ಶ್ಲೋಕ
84. ಶ್ರೀಕೃಷ್ಣ ಅಷ್ಟೋತ್ತರ ಶತನಾಮಸ್ತೋತ್ರ 23ನೇ ಶ್ಲೋಕ

ಈ ಸಂಸಾರದಲ್ಲಿ ಮತ್ತೆ ಮತ್ತೆ ಬರುತ್ತ ತೊಳಲಿ, ಬಳಲಿ, ಬಹಳವಾಗಿ ದಣಿದಿದ್ದೇನೆ. ಬ್ರಹ್ಮ, ರುದ್ರ, ಮೊದಲಾದ ದೇವತೆಗಳನ್ನು, ಗಜೇಂದ್ರನನ್ನು ರಕ್ಷಿಸಿದ ಭಗವಂತನೇ, ನಾರಾಯಣರೂಪಿಯೇ ನಿನಗೆ ನಮಸ್ಕಾರ.

**ವಿವರಣೆ : ಭವಭವದಿ ತೊಳತೊಳಲಿ ಬಳಬಳಲಿ ಬಲುದಣಿದೆ.**

ಈ ಸಂಸಾರದಲ್ಲಿ ಮತ್ತೆ ಮತ್ತೆ ಹುಟ್ಟಿ ಬರುತ್ತ ಕಷ್ಟಪಟ್ಟು, ಅಲೆದಾಡಿ, ಶ್ರಮಪಟ್ಟು ದಣಿದಿದ್ದೇನೆ.

ದೇವಹೂತಿ ದೇವಿಯು ಕಪಿಲರೂಪೀ ಪರಮಾತ್ಮನನ್ನು ಕುರಿತು ಹೇಳುವ ಮಾತು ಇಲ್ಲಿ ಗಮನಾರ್ಹ.

**ನಿರ್ವಿಣ್ಣಾ ನಿತರಾಂ ಭೂಮನ್ ಅಸದಿಂದ್ರಿಯತರ್ಪಣಾತ್ ॥**
**ಯೇನಸಂಭಾವ್ಯಮಾನೇನ ಪ್ರಪನ್ನಾಽಂಧಂತಮಃ ಪ್ರಭೋ ॥**[85]

ಗುಣಪೂರ್ಣಭಗವಂತ! ಈ ಸಂಸಾರದಲ್ಲಿ ದುಷ್ಟ ಇಂದ್ರಿಯಗಳ ವಿಷಯಲಾಲಸೆಯಿಂದ ಆ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿಯೇ ಬಹಳವಾಗಿ ಬಳಲಿರುವೆನು. ಲಾಲಿಸುವ ಇಂದ್ರಿಯಗಳಿಂದ ನಾನು ಅಜ್ಞಾನವನ್ನು ಹೊಂದಿರುವೆನು.

ಶ್ರೀ ಪ್ರಹ್ಲಾದರಾಜರು ಭಗವಂತನನ್ನು ಕುರಿತು ಪ್ರಾರ್ಥನೆ ಸಲ್ಲಿಸಿರುವುದು ಇಲ್ಲಿ ಮನನೀಯವಾಗಿದೆ.

**ಯಸ್ಮಾತ್ ಪ್ರಿಯಾಪ್ರಿಯ ವಿಯೋಗಸುಯೋಗಜನ್ಮ**
**ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ ।**
**ದುಃಖೌಷಧಂ ತದಪಿ ದುಃಖಮತದ್ಧಿಯಾಹಂ**
**ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಮ್ ॥** [86]

ಪ್ರಭುನರಸಿಂಹ! ನಾನು ಈ ಸಂಸಾರದಲ್ಲಿ ಹುಟ್ಟಿ ಬಂದು ಎಲ್ಲಯೋನಿಗಳಲ್ಲಿ ಇಷ್ಟ ಪದಾರ್ಥಗಳ ವಿಯೋಗ (ಅಗಲಿಕೆ), ಅನಿಷ್ಟ ಪದಾರ್ಥಗಳ ಸಂಯೋಗದಿಂದ ಉಂಟಾದ ಬೆಂಕಿಯಲ್ಲಿ ಬೇಯುತ್ತಾ ಬಳಲಿ ಹೋಗಿದ್ದೇನೆ. ಈ ದುಃಖಗಳನ್ನು ಕಳೆದುಕೊಳ್ಳಲು ಬಳಸಿದ ಔಷಧಿಗಳು ದುಃಖವನ್ನೇ ತರುತ್ತವೆ. ಇದರ ಪರಿಹಾರಕ್ಕಾಗಿ (ನಿನ್ನ ಅತ್ಯಂತಿಕ ದಾಸರಾದ ನಾರದಾದಿಗಳ ಸಂಗವನ್ನು) ನಿನ್ನ ದಾಸ್ಯವನ್ನು ನನಗೆ ಅನುಗ್ರಹಿಸು.

**ಭವ ವಿರಿಂಚ್ಯಾದಿ ಕರಿಗಭಯದನೆ ನೀ ಸಲಹು –**

ರುದ್ರದೇವರು, ಬ್ರಹ್ಮದೇವರು, ಗಜೇಂದ್ರ ಇವರೇ ಮೊದಲಾದವರಿಗೆ ಅಭಯವನ್ನು ಕೊಟ್ಟ ಭಗವಂತನೇ ನೀನು ನನ್ನನ್ನು ರಕ್ಷಿಸು.

---

85. ಶ್ರೀಮದ್ ಭಾಗವತ – (3–25–7)

86. ಶ್ರೀಮದ್ ಭಾಗವತ – (7–9–17)

ರುದ್ರದೇವರಿಗೆ ಅಭಯಕೊಟ್ಟ ವಿಷಯವನ್ನು ಮೂರನೆಯ ನುಡಿಯಲ್ಲಿ ವಿವರಿಸಲಾಗಿದೆ ಅಲ್ಲಿ ನೋಡಿಕೊಳ್ಳಬೇಕು.

ಜೀವಜಾತಕ್ಕೆಲ್ಲ ಶ್ರೇಷ್ಠಗುರುಗಳಾದ ಬ್ರಹ್ಮದೇವರು ಭಗವಂತನ ನಾಭಿಕಮಲದ ಕರ್ಣಿಕೆಯಲ್ಲಿ ಕುಳಿತು ಜಗತ್ತನ್ನು ಸೃಷ್ಟಿಸಬೇಕೆಂದು ಆಲೋಚಿಸಿದರು. ಆದರೆ ಜಗತ್ ಸೃಷ್ಟಿ ವಿಧಾನಕ್ಕೆ ಸಹಾಯಕವಾದ ಜ್ಞಾನವನ್ನು ಹೊಂದಲಿಲ್ಲ. ಆಗ ಅವರಿಗೆ "ತಪ" "ತಪ" ಎಂಬುದಾಗಿ ಕೇಳಿ ಬಂತು. ತಾವು ಶ್ರೀಹರಿಯಿಂದ ಆಜ್ಞಪ್ತರಾದವರಂತೆ ಭಾವಿಸಿ ತಪಸ್ಸಿನಲ್ಲಿ ಮಗ್ನರಾದರು. ತಪಸ್ಸಿನಿಂದ ಪ್ರಸನ್ನನಾದ ಶ್ರೀಹರಿಯು ಬ್ರಹ್ಮದೇವರನ್ನು ಕುರಿತು "ಬ್ರಹ್ಮನೇ! ಸೃಷ್ಟಿಯ ಸಲುವಾಗಿ ನೀನು ನನ್ನನ್ನು ಸಂತೋಷಪಡಿಸಿರುವೆ." ಎಂದು ಹೇಳಿ ಭಗವಂತನಾದ ಶ್ರೀಹರಿಯು ಅವರಿಗೆ ಅಭಯವನ್ನು ಕೊಟ್ಟು ಅನುಗ್ರಹಿಸಿದನು.[87]

ಇನ್ನು ಗಜೇಂದ್ರನಿಗೆ ಅಭಯಕೊಟ್ಟ ವಿಷಯವು ಮೊದಲ ನುಡಿಯಲ್ಲಿ ಬಂದಿದೆ. ಅಲ್ಲಿ ನೋಡಬಹುದು.

– ಇಂಥ ನಾರಾಯಣರೂಪೀ ಭಗವಂತನಿಗೆ ನಮಸ್ಕಾರವು.

**ನೀ ತಾಯಿ ನೀ ತಂದೆ ನೀ ಬಂಧು ನೀ ಬಳಗ**
**ನಾರಾಯಣಾಯ ನಮೋ ನಾರಾಯಣ**
**ನೀತಿಗಳನರಿಯೆ ನಿನ್ನಯ ನಾಮವೆ ಗತಿಯು**
**ನಾರಾಯಣಾಯ ನಮೋ ನಾರಾಯಣ ॥ 32 ॥**

ಭಗವಂತನೇ! ನೀನೇ ತಾಯಿ, ತಂದೆ, ಬಂಧು, ಬಳಗ ಎಲ್ಲವೂ ನೀನೇ ಆಗಿರುವಿ. ಇಂಥ ನಾರಾಯಣನೇ ನಿನಗೆ ನಮಸ್ಕಾರವು. ನಾನು ನೀತಿ ಶಾಸ್ತ್ರವನ್ನು ತಿಳಿದಿಲ್ಲ. ನನಗೆ ನಿನ್ನ ನಾಮವೇ ಗತಿ. ಅದೇ ಎಲ್ಲವೂ ಆಗಿದೆ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ : ನೀ ತಾಯಿ ನೀ ತಂದೆ ನೀ ಬಂಧು ನೀ ಬಳಗ–**

ಬ್ರಹ್ಮದೇವರು ಭಗವಂತನನ್ನು ಕುರಿತು ಹೇಳಿದ ಮಾತು ಇಲ್ಲಿ ಗಮನೀಯವಾಗಿದೆ.

**ಪಿತಾ ಮಾತಾ ಸುಹೃದ್‌ಬಂಧುಃ ಭ್ರಾತಾ ಪುತ್ರಸ್ತ್ವಮೇವ ಮೇ ॥** [88]

ಭಗವಂತ ನೀನೇ ನನಗೆ ತಂದೆ, ತಾಯಿ, ಸುಹೃತ್, ಬಂಧು, ಸಹೋದರ ಎಲ್ಲವೂ ನೀನೇ ಆಗಿರುವಿ.

ಅರ್ಜುನನನ್ನು ಕುರಿತು ಶ್ರೀಕೃಷ್ಣ ಹೇಳಿರುವ ಮಾತು ಮನನೀಯ

**ಪಿತಾಽಹಮಸ್ಯ ಜಗತೋ ಮಾತಾಧಾತಾ ಪಿತಾಮಹಃ ॥** [89]

---

87. ಶ್ರೀಮದ್ ಭಾಗವತ – (2–9–6)
88. ಪಂಚರಾತ್ರಾಗಮ – ಜಿತಂತೇಸ್ತೋತ್ರ (1–7) (ಕನ್ನಡಾನುವಾದ – ಶ್ರೀ ಪಂ॥ ಕೆ.ಜಿ. ಕಲಕೋಟಿ)
89. ಶ್ರೀಭಗವದ್ಗೀತೆ – (9–17)



ಅರ್ಜುನನೇ! ಈ ಜಗತ್ತಿನ ತಾಯಿ, ತಂದೆ, ಪೋಷಕ, ಪಿತಾಮಹ ಎಲ್ಲವೂ ನಾನೇ ಆಗಿದ್ದೇನೆ.

ದೇವಶರ್ಮ ಬ್ರಾಹ್ಮಣರು ಶ್ರೀವೆಂಕಟೇಶ್ವರನನ್ನು ಕುರಿತು ಹೇಳಿದ ಮಾತು ಹೀಗಿದೆ.

**ಪಿತಾ ಮಾತಾ ಗುರುರ್ಭ್ರಾತಾ ಸಖಾ ಬಂಧುಸ್ತ್ವಮೇವ ಮೇ ॥** [90]

ಹೇ ಪ್ರಭೋ! ತಂದೆ, ತಾಯಿ, ಗುರು, ಅಣ್ಣ, ಗೆಳೆಯ, ಬಂಧು ಎಲ್ಲವೂ ನೀನೇ ಆಗಿರುವಿ.

ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ನೀತಿಗಳರಿಯೆ, ನಿನ್ನ ನಾಮವೆ ಗತಿಯು–**

ಭಗವಂತ ನಾನು ನೀತಿಶಾಸ್ತ್ರವನ್ನು ತಿಳಿದಿಲ್ಲ. ನಿನ್ನ ನಾಮವೇ ನನಗೆ ಗತಿಯು, ನಿಶ್ಚಿತ.

ಶಿವನು ಪಾರ್ವತಿಯನ್ನು ಕುರಿತು ಹೇಳುತ್ತಾನೆ.

**ಈಶೋಽಹಂ ಸರ್ವಜಗತಾಂ ನಾಮ್ನಾಂ ವಿಷ್ಣೋರ್ಹಿಜಾಪಕಃ ।**
**ಸತ್ಯಂ ಸತ್ಯಂ ವದಾಮ್ಯೇವ ಹರೇರ್ನಾನ್ಯಾ ಗತಿರ್ನೃಣಾಮ್ ॥ ಪುರಾಣವಚನ.**

ನಾನು ಸಮಸ್ತ ಜಗತ್ತಿಗೆ ಒಡೆಯನಾಗಿದ್ದರೂ, ನಾನು ಭಗವಾನ್ ವಿಷ್ಣುವಿನ ನಾಮವನ್ನೇ ಜಪಿಸುತ್ತ ಇರುತ್ತೇನೆ. ಭಗವಂತನ ನಾಮವನ್ನು ಬಿಟ್ಟು ಜೀವರಿಗೆ ಬೇರೆ ಗತಿಯೇ ಇಲ್ಲ. ಇದು ಸತ್ಯ. ಸತ್ಯವೇ ಆಗಿದೆ.

**ಆರ್ತಾವಿಷಣ್ಣಾಃ ಶಿಥಿಲಾಶ್ಚ ಭೀತಾ**
**ಘೋರೇಷು ಚ ವ್ಯಾಧಿಷು ವರ್ತಮಾನಾಃ ।**
**ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ**
**ವಿಮುಕ್ತದುಃಖಾಃ ಸುಖಿನೋಭವಂತಿ ॥** [91]

ಆರ್ತರು, ವಿಷಣ್ಣರು, ವೃದ್ಧರು, ಭಯಗೊಂಡವರು, ಘೋರ ವ್ಯಾಧಿಗಳಿಂದ ನರಳುವವರು, "ನಾರಾಯಣನಾಮ"ವನ್ನು ಚೆನ್ನಾಗಿ ಕೀರ್ತನೆ ಮಾಡಿ ಸಮಸ್ತ ದುಃಖಗಳಿಂದ ಬಿಡುಗಡೆ ಹೊಂದಿ ಸುಖಿಗಳಾಗುತ್ತಾರೆ. ಶ್ರೀನಾರಾಯಣನ ನಾಮಕೀರ್ತನೆಯಿಂದ ಸಕಲ ಪಾಪಗಳಿಂದ, ದುಃಖಗಳಿಂದ ಬಿಡುಗಡೆ ಹೊಂದುತ್ತಾರೆ. ಕಾರಣ ನಾರಾಯಣನ ನಾಮವೇ ಮನುಷ್ಯರಿಗೆ ಗತಿಪ್ರದ ಎನಿಸಿದೆ.

**ತನು ನೆಚ್ಚಿಕಿಲ್ಲ ಚಿತ್ತದ ಗತಿಯು ನೀಟಿಲ್ಲ**
**ನಾರಾಯಣಾ ನಮೋ ನಾರಾಯಣ**
**ತನಯ ತರುಣಿ ಕೊನೆಯ ಸಂಗತಿಗೆ ಆರಿಲ್ಲ**
**ನಾರಾಯಣಾ ನಮೋ ನಾರಾಯಣ ॥ 33 ॥**

---

90. ಆದಿತ್ಯಪುರಾಣ ವೆಂಕಟೇಶ ಮಹಾತ್ಮೆ – (5–26)

91. ಶ್ರೀಕೃಷ್ಣಾಮೃತಮಹಾರ್ಣವ – 65ನೆಯ ಶ್ಲೋಕ.

ಈ ಮನುಷ್ಯ ದೇಹವನ್ನು ನಂಬುವಂತಿಲ್ಲ. ಮನಸ್ಸಿನ ಗತಿಯು ನೇರವಾಗಿಲ್ಲ. ಪುತ್ರ, ಹೆಂಡತಿ, ಇವರು ಯಾರೂ ಮರಣ ಬಂದಾಗ ಜೊತೆಗೆ ಬಾರರು. ಜೀವನೊಬ್ಬನೇ ಈ ಲೋಕಬಿಟ್ಟು ಹೋಗಬೇಕಾಗುತ್ತದೆ. "ನಾರಾಯಣನ ನಾಮ ನೆರೆಬಾಹೋದಲ್ಲದೇ ಆರೂ ಸಂಗಡ ಬಾ ಹೋರಿಲ್ಲ" ಉಕ್ತಿಯಂತೆ ಕೊನೆಯಲ್ಲಿ ಜೊತೆಯಾಗಿ ಬರುವುದು ನಾರಾಯಣನ ನಾಮ ಮಾತ್ರವೇ. ಇಂಥ ನಾರಾಯಣನಿಗೆ ನಮಸ್ಕಾರವು.

**ವಿವರಣೆ : ತನು ನೆಚ್ಚಿಕಿಲ್ಲ ಚಿತ್ತದ ಗತಿಯು ನೀಟಿಲ್ಲ–**

ಈ ಮನುಷ್ಯದೇಹವನ್ನು ನಂಬುವಂತಿಲ್ಲ. ಇದು ಅಶಾಶ್ವತ. ಶೀಘ್ರವಾಗಿ ಬಿದ್ದು ಹೋಗುವಂತಹದು.

ಶ್ರೀಕೃಷ್ಣ ಹೀಗೆ ತಿಳಿಸಿದ್ದಾನೆ.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ ॥** [92]

ಸಂಸಾರಿ ಜೀವರ ಸ್ವರೂಪವು ನಿತ್ಯವೇ ಆಗಿದ್ದರೂ ಅವರ ಈ ಭೌತಿಕದೇಹಗಳು ನಶ್ವರ, ಅಶಾಶ್ವತ.

**ಕೋ ಹಿ ಜಾನಾತಿ ಕಸ್ಮಾದ್ಯ ಮೃತ್ಯುಕಾಲೋ ಭವಿಷ್ಯತಿ ।**
**ಯುವೈವ ಧರ್ಮಶೀಲಃಸ್ಯಾತ್ ಅನಿತ್ಯಂ ಖಲು ಜೀವಿತಮ್ ॥** [93]

ಮನುಷ್ಯ ದೇಹವು ಅನಿತ್ಯವಾದುದು. ಅದು ಯಾವಾಗ ಮೃತ್ಯು ವಶವಾಗುವದೋ ಯಾರೂ ತಿಳಿದಿಲ್ಲ. ಆದ್ದರಿಂದ ಜೀವಿತಕಾಲದಲ್ಲಿ ಧರ್ಮವನ್ನು ಸಂಪಾದಿಸಿ ಭಗವಂತನ ಅನುಗ್ರಹವನ್ನು ಸಂಪಾದಿಸಬೇಕು.

**ಲಬ್ಧ್ವಾಸುದುರ್ಲಭಮಿದಂ ಬಹುಸಂಭವಾಂತೇ**
**ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।**
**ತೂರ್ಣಂ ಯತೇತ ನ ಪತೇದನುಮೃತ್ಯುಯಾವ**
**ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃಸ್ಯಾತ್ ॥** [94]

ಬಹುಜನ್ಮಗಳ ಕೊನೆಯಲ್ಲಿ ಪುಣ್ಯವಶದಿಂದ ಬರುವ ಈ ಅನಿತ್ಯವಾದ, ಅಶಾಶ್ವತವಾದ ಪುರುಷಾರ್ಥ ಸಾಧನವಾದ ಮನುಷ್ಯ ದೇಹವನ್ನು ಹೊಂದಿ ಬುದ್ಧಿವಂತನಾದ ಜೀವನು, ತನ್ನ ಬೆನ್ನೇರಿ ಬರುವ ಮೃತ್ಯುನುಂಗಲಿರುವ ಈ ದೇಹವು ಬಿದ್ದು ಹೋಗುವ ಮೊದಲು ಭಗವಂತನನ್ನು ಸೇವಿಸಿ ಅತ್ಯರ್ಥ ಪ್ರಸಾದವನ್ನು ಹೊಂದಿ ಮೋಕ್ಷಭಾಗಿಯಾಗಲು ಪ್ರಯತ್ನ ಮಾಡಬೇಕಾದುದು ಅವಶ್ಯವಾಗಿದೆ.

**ತನಯ ತರುಣಿ ಕೊನೆಯ ಸಂಗತಿಗೆ ಆರಿಲ್ಲ –**

---

92. ಶ್ರೀಭಗವದ್ಗೀತಾ – (2–18)

93. ಶ್ರೀಮನ್ ಮಹಾಭಾರತ ಶಾಂತಿಪರ್ವ.

94. ಶ್ರೀಮದ್ ಭಾಗವತ (11–90–28)



ಜೀವನಿಗೆ ಮರಣ ಬಂದಾಗ ಅವನ ಪುತ್ರ, ಹೆಂಡತಿ ಯಾರೂ ಜೊತೆಗೆ ಬರುವದಿಲ್ಲ. ಜೀವನೊಬ್ಬನೇ ಈ ಲೋಕಬಿಟ್ಟು ಹೋಗಬೇಕಾಗುತ್ತದೆ. ಜೀವಿತಕಾಲದಲ್ಲಿ ಇವನು ಮಾಡಿದ ಹರಿನಾಮಸ್ಮರಣೆ, ಗಳಿಸಿದ ಧರ್ಮಗಳು ಮಾತ್ರ ಬೆನ್ನತ್ತಿ ಬರುತ್ತವೆ.

**ರಾಯಃ ಕಲತ್ರಂ ಪಶವಃ ಸುತಾದಯೋ**
**ಗೃಹಾಮಹೀಕುಂಜರ ಕೋಶಭೂತಯಃ ।**
**ಸರ್ವೇರ್ಥಕಾಮಾಃ ಕ್ಷಣಭಂಗುರಾಯಷಃ**
**ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥** [95]

ಸಂಪತ್ತು, ಹೆಂಡತಿ, ಪಶುಗಳು, ಮಗ ಮೊದಲಾದವರು, ಮನೆ, ಹೊಲ, ಕೋಶ ಇವೆಲ್ಲವೂ ಅಲ್ಪಕಾಲವಿದ್ದು ನಾಶವಾಗುವ ಭೋಗ ಸಾಮಗ್ರಿಗಳು. ಅಸ್ಥಿರವಾದ ಈ ವಸ್ತುಗಳು ಮನುಷ್ಯನನ್ನು ಎಂದೂ ಸಂತೋಷಪಡಿಸಲಾರವು.

**ಮೃತಂ ಶರೀರಮುತ್ಸೃಜ್ಯಕಾಷ್ಠಲೋಷ್ಠಸಮಂ ಕ್ಷಿತೌ ।**
**ವಿಮುಖಾಬಾಂಧವಾಯಾಂತಿ ಧರ್ಮಸ್ತಮನುಗಚ್ಛತಿ ॥** [96]

ಜೀವನು ಸತ್ತಮೇಲೆ ಅವನ ದೇಹವನ್ನು ಭೂಮಿಯಲ್ಲಿ ಇಟ್ಟು, ಸುಟ್ಟು, ಬಾಂಧವರೆಲ್ಲರೂ ಹೊರಟು ಹೋಗುತ್ತಾರೆ. ಆದರೆ ಸತ್ತ ಜೀವನನ್ನು ಧರ್ಮವೊಂದೇ ಅನುಸರಿಸಿ ಹೋಗುತ್ತದೆ. ಕಾರಣ ಜೀವಿತಕಾಲದಲ್ಲಿ ಮನುಷ್ಯನು ಧರ್ಮವನ್ನು ಗಳಿಸಲು ಪ್ರಯತ್ನಿಸಬೇಕು.

ಶ್ರೀದಾಸಶ್ರೇಷ್ಠ ಕನಕದಾಸರು ತಮ್ಮ ಪದ್ಯವೊಂದರಲ್ಲಿ

ಆರೂ ಸಂಗಡ ಬಾಹೋರಿಲ್ಲ – ನಾರಾಯಣನ ನಾಮ ನೆರೆಬಾಹೋದಲ್ಲದೇ – ಎಂಬುದಾಗಿ ತಿಳಿಸಿಕೊಟ್ಟಿರುವುದು ಇಲ್ಲಿ ಮೆಲುಕು ಹಾಕುವಂತಿದೆ.

**ದೋಷಗಳನರಸದೆನ್ನನು ಸಾಕು ಸಾಕಯ್ಯ**
**ನಾರಾಯಣಾಯ ನಮೋ ನಾರಾಯಣ ।**
**ದಾಸಪಾಲಕ ದೇವ ಡಿಂಗರರ ಸಂಜೀವ**
**ನಾರಾಯಣಾಯ ನಮೋ ನಾರಾಯಣ ॥ 34 ॥**

ನನ್ನ ದೋಷಗಳನ್ನು ಹುಡುಕದೇ ನನ್ನನ್ನು ಸಾಕಿಸಲುಹಬೇಕು. ನೀನು ನಿನ್ನ ದಾಸರನ್ನು ರಕ್ಷಿಸುವ ದೊರೆ, ನಿನ್ನ ಭಕ್ತರನ್ನು ರಕ್ಷಿಸುವ ದೇವನೀನಾಗಿದ್ದೀ. ಇಂಥ ನಾರಾಯಣನೇ ನಿನಗೆ ನಮಸ್ಕಾರವು.

**ವಿವರಣೆ : ದೋಷಗಳನರಸದೆನ್ನನು ಸಾಕು ಸಾಕಯ್ಯ**

ಭಗವಂತನೇ ನಾನು ದೋಷಗಳಿಗೆ ಆಗರ. ನನ್ನ ದೋಷಗಳನ್ನು ನೀನು ಹುಡುಕದೇ ಸಾಕಿ ಸಲುಹಬೇಕು. ಎಂಬುದಾಗಿ ಶ್ರೀದಾಸರು ಇಲ್ಲಿ ತಿಳಿಸಿದ್ದಾರೆ.

---

95. ಶ್ರೀಮದ್ ಭಾಗವತ (7–7–41)

96. ಮನುಸ್ಮೃತಿ



ದೋಷಗಳು ಎಂದರೆ ಪಾಪಗಳು, ಅಪರಾಧಗಳು.

ದೇವಶರ್ಮಬ್ರಾಹ್ಮಣರು ದೇವರನ್ನು ಕುರಿತು ಹೇಳೀದ ಮಾತು ಮನನೀಯ –

**ಗುಣಾಸ್ತ್ವಯಿ ಯಥಾಪೂರ್ಣಾಃ**
**ದೋಷಾಃ ಪೂರ್ಣಾಸ್ತಥಾಮಯಿ** ॥ ಆದಿತ್ಯಪುರಾಣ ಶ್ರೀವೆಂ.ಮ. (5–24)

ಶ್ರೀ ಚತುರ್ಮುಖ ಬ್ರಹ್ಮದೇವರು ಭಗವಂತನನ್ನು ಕುರಿತು ಹೇಳಿದ ಮಾತನ್ನು ಸ್ಮರಿಸಬೇಕು.

**ಕೃಶಂ ಕೃತಘ್ನಂ ದುಷ್ಕರ್ಮಕಾರಿಣಂ ಪಾಪಭಾಜನಮ್ ।**
**ಅಪರಾಧಸಹಸ್ರಾಣಾಂ ಆಕರಂ ಕರುಣಾಕರ ॥**
**ಕೃಪಯಾ ಮಾಂ ಕೇವಲಯಾ ಗೃಹಾಣ ಮಥುರಾಧಿಪ ।**
**ವಿಷಯಾರ್ಣವಮಗ್ನಂ ಮಾಂ ಉದ್ಧರ್ತುಂ ತ್ವಮಿಹಾರ್ಹಸಿ ॥** [97]

ದುಷ್ಕರ್ಮಗಳನ್ನು ಮಾಡುವ ಆದ್ದರಿಂದಲೇ ಪಾಪಗಳಿಗೆ ಪಾತ್ರನಾದ, ಕೃತಘ್ನನಾದ, ಕೃಶನಾದ, ಸಾವಿರಾರು ಅಪರಾಧಗಳಿಗೆ ಆಶ್ರಯನಾದ, ನನ್ನನ್ನು ಹೇ ಕರುಣಾಕರನೇ! ಮಥುರಾಧಿಪತಿಯೇ ! ಕೃಪೆಯಿಂದ ಸಲಹು. ವಿಷಯಗಳೆಂಬ ಸಮುದ್ರದಲ್ಲಿ ಮುಳುಗಿದ ನನ್ನನ್ನು ಉದ್ಧರಿಸಲು ನೀನು ಅರ್ಹನಾಗಿರುವಿ.

ಶ್ರೀಪ್ರಸನ್ನವೆಂಕಟದಾಸರೇ ತಮ್ಮ, ನೀ ಕರುಣಿಸೋ ವಿಠ್ಠಲಾ ನಮ । ಸಾಕೋ ಪಂಢರಿವಿಠ್ಠಲಾ ಪದ್ಯದಲ್ಲಿ –

ದೋಷಿಗಳೊಳಗೆ ಹಿರಿಯನು ನಾ ನಿರ್ದೋಷಿಗಳರಸೇ ವಿಠ್ಠಲಾ । ಎಂಬುದಾಗಿ ಭಗವಂತನನ್ನು ಕುರಿತು ಹೇಳಿರುವುದು ಗಮನಾರ್ಹ.

ಆ ಭಗವಂತ ದಾಸಪಾಲಕ ಎಂದರೆ ಭಕ್ತ ಪಾಲಕನೆಂದು ಅರ್ಥವು.

**ಪಾಲಕೋ ಹಿ ಬಹೂನಾಂ ಚ ಭಕ್ತಾನಾಂ ಭಕ್ತವತ್ಸಲ ॥**[98]

ಭಕ್ತವತ್ಸಲನಾದ ಭಗವಂತನು ಅನೇಕ ಭಕ್ತರನ್ನು ಸಲಹುತ್ತಾನೆ ರಕ್ಷಿಸುತ್ತಾರೆ. ಆ ಭಗವಂತ ಡಿಂಗರರ ಸಂಜೀವ ಎನಿಸಿದ್ದಾನೆ.

ಡಿಂಗರ ಎಂದರೆ ದಾಸ, ಕಿಂಕರ ಎಂದು ಅರ್ಥವು. ಭಗವಂತ ತನ್ನ ದಾಸರನ್ನು ಬದುಕುವಂತೆ ಮಾಡುತ್ತಾನೆ, ಉಜ್ಜೀವನಗೊಳಿಸುತ್ತಾನೆ.

ಶ್ರೀಧ್ರುವರಾಜರು ವಾಸುದೇವರೂಪೀ ಭಗವಂತನನ್ನು ಸ್ತೋತ್ರ ಮಾಡುತ್ತಾರೆ.

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।**

97. ಪಂಚರಾತ್ರಾಗಮ – ಜಿತಂತೇಸ್ತೋತ್ರ – (1–5,6)

98. ಶ್ರೀ ಆದಿತ್ಯಪುರಾಣವೆಂಕಟೇಶಮಹಾತ್ಮೆ (1–31)



**ಅನ್ಯಾಂಶ್ಚ ಹಸ್ತ ಚರಣ ಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯತುಭ್ಯಮ್** ॥ [99]

ಸ್ತೋತ್ರ ಮಾಡಲು ಅಸಮರ್ಥನಾಗಿದ್ದ ನನ್ನ ವಾಗಿಂದ್ರಿಯವನ್ನು, ಇಂದ್ರಿಯ, ಇಂದ್ರಿಯಾಭಿಮಾನಿಗಳಿಗೆ ಶಕ್ತಿಪ್ರೇರಕನಾದ, ಯಾರು ನನ್ನೊಳಗೆ ಪ್ರವೇಶಿಸಿ ಸ್ವಸಾಮರ್ಥ್ಯದಿಂದ ಉಜ್ಜೀವನಗೊಳಿಸುವನೋ, ಹಾಗೆಯೇ ಕೈಕಾಲು, ಕಿವಿ, ತ್ವಚೆ ಮುಂತಾದ ಬೇರೆ ಇಂದ್ರಿಯಗಳನ್ನು ಚೈತನ್ಯಪೂರ್ಣವಾಗಿಸುವನೋ ಅಂಥ ದೇಹಾಂತರ್ನಿಯಾಮಕನಾದ ಭಗವಾನ್ ವಾಸುದೇವನೇ ನಿನಗೆ ನನ್ನ ನಮಸ್ಕಾರವು.

ಸಂಜೀವಯತೀತಿ – ಸಂಜೀವಃ, ಭಗವಂತ ಒಳಗಿದ್ದು ಜೀವರನ್ನು ಬದುಕುವಂತೆ ಉಜ್ಜೀವನಗೊಳಿಸುತ್ತಾನೆ. ಅದನ್ನೇ ಇಲ್ಲಿ ಸಂಜೀವ ಶಬ್ದದಿಂದ ತಿಳಿಸಿದ್ದಾರೆ.

ಶ್ರೀ ಜಗನ್ನಾಥದಾಸರು ತಮ್ಮ "ಶ್ರೀವೆಂಕಟಾಚಲನಿವಾಸಾ । ನಿನ್ನ ಸೇವಾನು ಸೇವಕರ ದಾಸಾ ಎನಿಸಿ" ಪದ್ಯದಲ್ಲಿ ಭಗವಂತನನ್ನು ಕುರಿತು– ಗತಿಯಾರು ನಿನ್ನುಳಿದು ದೇವ । ರಮಾಪತಿ ನೀನೇ ಭಕ್ತಸಂಜೀವ – ಎಂಬುದಾಗಿ ಸ್ತುತಿಸಿರುವುದು ಗಮನಾರ್ಹವಾಗಿದೆ.

ಅಂಥ ನಾರಾಯಣರೂಪೀ ಭಗವಂತನಿಗೆ ನಮಸ್ಕಾರವು.

**ನಿನ್ನ ಮೂರುತಿ ನೋಡಿ ನೋಡಿ ನೋಡಿ ನೋಡಿ**
**ನಾರಾಯಣಾಯ ನಮೋ ನಾರಾಯಣ ।**
**ನಿನ್ನ ಬಿಂಬವನೆಂದು ಕಂಡು ಕೊಂಡಾಡುವೆನೋ**
**ನಾರಾಯಣಾಯ ನಮೋ ನಾರಾಯಣ ॥ 35 ॥**

ಭಗವಂತ! ನಾನು ನಿನ್ನ ಮೂರುತಿಯನ್ನು ನೋಡಿ ಮತ್ತೆ ಮತ್ತೆ ನೋಡಿ, ನೀನು ನನ್ನ ಬಿಂಬನಾಗಿದ್ದೀ ಎಂಬುದನ್ನು ಕಂಡುಕೊಂಡು ನಿನ್ನನ್ನು ಕೊಂಡಾಡುತ್ತೇನೆ. ಇಂಥ ನಾರಾಯಣರೂಪೀ ಭಗವಂತನೇ ನಿನಗೆ ನಮಸ್ಕಾರವು.

**ವಿವರಣೆ : ನಿನ್ನ ಮೂರುತಿ ನೋಡಿ ನೋಡಿ ನೋಡಿ ನೋಡಿ –**

ನಮ್ಮ ಕಣ್ಣುಗಳಿಗೆ ಸಾರ್ಥಕ್ಯ ಉಂಟಾಗುವದು ಆ ಭಗವಂತನ ಮೂರ್ತಿಯನ್ನು ನೋಡಿದಾಗ ಮಾತ್ರ.

**ಶಿರಸ್ತು ತಸ್ಯೋಭಯಲಿಂಗಮಾನಮೇತ್**
**ತದೇವಯತ್ಪಶ್ಯತಿ ತದ್ಧಿಚಕ್ಷುಃ** ॥ [100]

ಚರಾಚರ ಜಗತ್ತನ್ನು ಭಗವಂತನ ಅಚಲಪ್ರತಿಮೆಯೆಂದರಿತು ನಮಸ್ಕರಿಸುವ ತಲೆಯೇ – ಸಾರ್ಥಕವಾದ ತಲೆ. ಹಾಗೆಯೇ ಸರ್ವತ್ರ ಭಗವಂತನ ಮೂರುತಿಯನ್ನು ನೋಡುವ ಕಣ್ಣುಗಳೇ ಸಾರ್ಥಕವಾದ ಕಣ್ಣುಗಳು. ಹಾಗಾಗಿ ಭಗವಂತನ ಮೂರುತಿಯನ್ನು ಮತ್ತೆ ಮತ್ತೆ ನೋಡುತ್ತಿರಬೇಕು.

99. ಶ್ರೀಮದ್ ಭಾಗವತ (4–10–6)

100. ಶ್ರೀಮದ್ ಭಾಗವತ (10–80–4)



**ನಿನ್ನ ಬಿಂಬವನೆಂದು ಕಂಡು ಕೊಂಡಾಡುವೆನೋ –**

ಭಗವಂತನು ಬಿಂಬ ನಾನು ಅವನ ಪ್ರತಿಬಿಂಬ ಎಂದು ತಿಳಿದು ಕೊಂಡಾಡಬೇಕು.

**ರೂಪಂ ರೂಪಂ ಪ್ರತಿರೂಪೋಬಭೂವ ॥**[101]

ಈ ಶ್ರುತಿವಾಕ್ಯದಲ್ಲಿ ಭಗವಂತನು ಬಿಂಬನು, ಜೀವನು ಪ್ರತಿಬಿಂಬನೆಂದು ತಿಳಿಸಿದ್ದಾರೆ. "ಬಿಂಬಕ್ರಿಯಯೈವ ಕ್ರಿಯಾವಾನ್" ಉಕ್ತಿಯಂತೆ ಪ್ರತಿಬಿಂಬನಾದ ಜೀವನು ಬಿಂಬನಾದ ಭಗವಂತನ ಅಧೀನನು ಎಂದು ತಿಳಿಯಬೇಕು. ಆದ್ದರಿಂದ ಶ್ರೀ ಜಗನ್ನಾಥದಾಸರು ಹೇಳಿದ ಮಾತನ್ನು ಗಮನಿಸಬೇಕು.

**ನೀನಲ್ಲದೆನಗೆ ಗತಿಯಿಲ್ಲಾ । ಪವ**
**ಮಾನ ವಂದಿತ ಕೇಳೋಸೊಲ್ಲ । ಎನ್ನ**
**ಜ್ಞಾನೇಚ್ಛೆ ಕ್ರಿಯೆಗಳೆಲ್ಲ । ನಿನ್ನ**
**ಧೀನವಲ್ಲವೇ ಲಕ್ಷ್ಮೀನಲ್ಲಾ ॥** [102]

ಹೀಗೆ ಭಗವಂತನನ್ನು ಕಂಡು ಕೊಂಡಾಡಬೇಕಾದುದು ಅತೀ ಅವಶ್ಯವಾಗಿದೆ.

**ನಿನ್ನ ಮೈ ಬೆಮರ್ವೊಳೆಯಲ್ಲೆನ್ನ ಮುಳುಗಿಸಿ ।**
**ನಾರಾಯಣಾಯ ನಮೋ ನಾರಾಯಣ ।**
**ನಿನ್ನವ ನಾ ನಿನ್ನವರ ಕೈಲಿ ಕೊಡು ಗಡ ಗಡ ।**
**ನಾರಾಯಣಾಯ ನಮೋ ನಾರಾಯಣ ॥ 36 ॥**

ಭಗವಂತ ನಿನ್ನ ಮೈ ಬೆಮರ್ವೊಳೆಯಾದ ವಿರಜಾನದಿಯಲ್ಲಿ ನನ್ನನ್ನು ಮುಳುಗಿಸಿ ಲಿಂಗದೇಹ ಭಂಗವಾಗುವಂತೆ ಮಾಡಿ, ನಿನ್ನವನು ನಾನೆಂದು ನನ್ನ ಸ್ವರೂಪಾನಂದವನ್ನು ಅಭಿವ್ಯಕ್ತಿಗೊಳಿಸಿ ನಿನ್ನ ಭಕ್ತರ ಕೈಯಲ್ಲಿ ನನ್ನನ್ನು ಕೊಡು. ಅವರಿಗೆ ವಿಧೇಯನಾಗಿ ನಾನು (ಮುಕ್ತಿಯಲ್ಲಿ) ಇರುತ್ತೇನೆ.

**ವಿವರಣೆ : ನಿನ್ನ ಮೈಬೆಮರ್ವೊಳೆಯಲ್ಲೆನ್ನ ಮುಳುಗಿಸಿ–**

ಭಗವಂತನ ಮೈಬೆಮರ್ವೊಳೆಯೆಂದರೆ ವಿರಜಾನದಿಯು. ವೈಕುಂಠದಲ್ಲಿರುವ ವಿರಜಾನದಿಯು ಶ್ರೀಹರಿಯ ಬೆವರ ಹನಿಯಾಗಿ ಅಭಿವ್ಯಕ್ತವಾಗಿದೆ.

ಶ್ರೀಜಗನ್ನಾಥದಾಸರು ತಮ್ಮ ಮೇರುಕೃತಿ ಶ್ರೀಹರಿಕಥಾಮೃತಸಾರದಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ.

**ಈ ಪುರುಷನಾಮಕನ ಶುಭಸ್ವೇ**
**ದಾಪಳೆನಿಸಿ ರಮಾಂಬ ತಾ ಬ್ರ**
**ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ॥** [103]

101. ಕಠಶ್ರುತಿ (2–5–9) ಗೀತೆಯ ಅಂತರಂಗ–ಶ್ರೀನಿವಾಸ ಸು.ಮಠದ ಅವರಿಂದ ಪ್ರಕಟಿತ ಪು. 31
102. ಶ್ರೀವೆಂಕಟಾಚಲನಿವಾಸಾ । ನಿನ್ನ ಸೇವಾನುಸೇವಕರ ದಾಸಾ ಎನಿಸಿ ॥ ಶ್ರೀ ಜಗನ್ನಾಥದಾಸರು.
103. ಶ್ರೀಹರಿಕಥಾಮೃತಸಾರ (4–15)

ಇಲ್ಲಿ ಪ್ರಕಾಶಸಂಹಿತಾ ಪ್ರಮಾಣವನ್ನು ಗಮನಿಸಬಹುದು –

**ಪ್ರಧಾನ ಪರಮವ್ಯೋಮ್ನೋರಂತರಾ ವಿರಜಾನದೀ ।**

**ದೇವಾಂಗಸ್ವೇದಜನಿತಾ...........** ॥ (1–15–22)

ಪುರುಷನಾಮಕನಾದ ಶ್ರೀಹರಿಯ ಮಂಗಳಕರವಾದ ಸ್ವೇದ (ಬೆವರು) ಜಲವೆನ್ನಿಸಿದ ವಿರಜಾನದಿಯ ರೂಪವಾಗಿ ತಾಯಿಯಾದ ಶ್ರೀಮಹಾಲಕ್ಷ್ಮಿಯು ತಾನು ಬ್ರಹ್ಮಾಪರೋಕ್ಷ ಜ್ಞಾನವನ್ನು ಪಡೆದವರ ಲಿಂಗದೇಹವನ್ನು ಭಂಗಪಡಿಸುವಳು.

ಇಂಥ ವಿರಜಾನದಿಯಲ್ಲಿ ಎನ್ನ ಮುಳುಗಿಸು ಎನ್ನುತ್ತಿದ್ದಾರೆ ದಾಸರು. ಇಲ್ಲಿ ಸ್ನಾನ ಮಾಡಿದವರ ಲಿಂಗದೇಹ ಭಂಗವಾಗುವದು ನಿಶ್ಚಿತ.

**ಬ್ರಹ್ಮಣಾ ಸಹ ವಿರಜಾನದೀ ಸ್ನಾನೇನ ತ್ಯಕ್ತಲಿಂಗಾನಾಂ** ॥ [104]

**ಇನ್ನು ನಿನ್ನವ ನಾ ನಿನ್ನವರ ಕೈಲಿಕೊಡು ಗಡ ಗಡ–** ಎನ್ನುವಲ್ಲಿ ಈ ಭಾವ ಅಡಗಿದೆ.

ಅಪರೋಕ್ಷ ಜ್ಞಾನಾನಂತರದಲ್ಲಿ ಬ್ರಹ್ಮದೇವರ ಜೊತೆಗೆ ವಿರಜಾನದೀ ಸ್ನಾನದ ನಂತರ ಲಿಂಗದೇಹ ಕಳಚಿ ಹೋಗಿ ಸ್ವರೂಪದೇಹದಿಂದ ವಾಸುದೇವ ಭಗವದ್ರೂಪದರ್ಶನ ಮಾಡಿಕೊಂಡು ಅಲ್ಲಿರುವ ಮುಕ್ತರ ಜೊತೆ ಇದ್ದು ತನ್ನ ಸ್ವರೂಪಾನಂದವನ್ನು ಅನುಭವಿಸುವದೇ ಮುಕ್ತಿಯು. ಈ ಮುಕ್ತರ ಕೈಯಲ್ಲಿ ನನ್ನನ್ನು ಕೊಡು ಎಂದರೆ ನಾನು ಸ್ವೋತ್ತಮರ ಅಧೀನನಾಗಿದ್ದು ಮುಕ್ತಿ ಸುಖವನ್ನು ಅನುಭವಿಸುತ್ತೇನೆ. ಈ ಮುಕ್ತಿಸುಖ ದಯಪಾಲಿಸುವ ಶ್ರೀನಾರಾಯಣನೇ ನಿನಗೆ ನಮಸ್ಕಾರವು.

**ವಾರಿಯಲಿ ಸ್ಥಳದಲ್ಲಿ ಅಡವಿಲೆಲ್ಲೆಲ್ಲಿ ಕಾಯೋ**
**ನಾರಾಯಣಾಯ ನಮೋ ನಾರಾಯಣ**
**ವಾರಾಹ ವಾಮನ ನೃಸಿಂಹಕೇಶವಸ್ವಾಮಿ**
**ನಾರಾಯಣಾಯ ನಮೋ ನಾರಾಯಣ ॥ 37 ॥**

ನೀರಿನಲ್ಲಿ, ಸ್ಥಳದಲ್ಲಿ, ಅಡವಿಯಲ್ಲಿ ವರಾಹ, ವಾಮನ, ನೃಸಿಂಹ ಕೇಶವರೂಪಿಯಾದ ಸ್ವಾಮಿ ಶ್ರೀನಾರಾಯಣನೇ ನೀನೇ ರಕ್ಷಿಸಬೇಕು. ನಿನಗೆ ನಮಸ್ಕಾರವು.

**ವಿವರಣೆ :**

**ವಾರಿಯಲಿ ಸ್ಥಳದಲ್ಲಿ ಅಡವಿಲೆಲ್ಲೆಲ್ಲಿ ಕಾಯೋ**
**ವಾರಾಹ ವಾಮನ ನೃಸಿಂಹ ಕೇಶವ ಸ್ವಾಮಿ ॥**

ಶ್ರೀನಾರಾಯಣಕವಚದಲ್ಲಿ ಶ್ರೀನಾರಾಯಣರೂಪೀ ಭಗವಂತನನ್ನು ಪ್ರಾರ್ಥಿಸಿದ ಪರಿ ಹೀಗಿದೆ.

104. ಶ್ರೀಪ್ರಾತಃಸಂಕಲ್ಪಗದ್ಯ – ಶ್ರೀ ರಾಘವೇಂದ್ರ ಸ್ವಾಮಿಗಳಿಂದ ವಿರಚಿತ.



**ಜಲೇಷು ಮಾಂ ರಕ್ಷತು ಮತ್ಸ್ಯಮೂರ್ತಿಃ**
**ಸ್ಥಲೇಷು ಮಾಯಾವಟುವಾಮನೋಽವ್ಯಾತ್ ।**
**ದುರ್ಗೇಷ್ವಟವ್ಯಾಜಿಮುಖಾದಿಷು ಪ್ರಭುಃ**
**ಪಾಯಾನ್ನೃಸಿಂಹೋಽಸುರಯೂಥಪಾರಿಃ ।**
**ಮಾಂ ಕೇಶವೋ ಗದಯಾ ಪ್ರಾತರವ್ಯಾದ್ ॥** [105]

ಮತ್ಸ್ಯರೂಪಿಯಾದ ಭಗವಂತನು ಜಲದಲ್ಲಿ ರಕ್ಷಿಸಲಿ. ಮಾಯೆಯಿಂದ ಬ್ರಹ್ಮಚಾರಿಯ ರೂಪವನ್ನು ಧರಿಸಿದ ಭಗವಾನ್ ವಾಮನನು ಸ್ಥಲದಲ್ಲಿ ರಕ್ಷಿಸಲಿ. ಭಗವಾನ್ ನರಸಿಂಹನು ಅಡವಿಯಲ್ಲಿ, ರಣಭೂಮಿಯಲ್ಲಿ ರಕ್ಷಿಸಲಿ. ಪ್ರಾತಃಕಾಲದಲ್ಲಿ ಕೇಶವರೂಪೀ ಭಗವಂತನು ಗದಾಹಸ್ತನಾಗಿ ರಕ್ಷಿಸಲಿ. ಪೂರ್ವದಲ್ಲಿ ಪ್ರಳಯಜಲದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸುವ ವರಾಹರೂಪೀ ಶ್ರೀಹರಿಯಿಂದ ಬ್ರಹ್ಮಜನಾದ ಹಿರಣ್ಯಾಕ್ಷನು ಸಂಹರಿಸಲ್ಪಟ್ಟನು. ಎರಡನೆಯ ಬಾರಿಗೆ ಹಿರಣ್ಯಾಕ್ಷನು ಭೂಮಿಯನ್ನು ಅಪಹರಿಸಿ ಸಮುದ್ರದಲ್ಲಿ ಮುಳುಗಿಸಿದ್ದನು. ವರಾಹರೂಪೀ ಭಗವಂತನು ಈ ಭೂಮಿಯನ್ನು ಮೇಲಕ್ಕೆ ತರುವಾಗ ಹಿರಣ್ಯಾಕ್ಷನು ವರಾಹರೂಪೀ ಶ್ರೀಹರಿಯ ಕೈಯಿಂದ ಹೊಡೆಸಿಕೊಂಡು ಸತ್ತನು. ಈ ಕಾರಣದಿಂದ, ನೀರಲ್ಲಿ ವರಾಹರೂಪೀ ಭಗವಂತನು ರಕ್ಷಿಸಲಿ ಎಂದಿದ್ದಾರೆ. ನೀರಿನಲ್ಲಿ ವರಾಹರೂಪಿಯು ರಕ್ಷಿಸಲಿ ಎಂಬುದಾಗಿ ಶ್ರೀದಾಸರು ಇಲ್ಲಿ ಹೇಳಿದ್ದಾರೆ.

ಹೀಗೆ ಎಲ್ಲೆಡೆ ರಕ್ಷಿಸುವ ನಾರಾಯಣರೂಪೀ ಭಗವಂತನಿಗೆ ನಮಸ್ಕಾರವು.

**ಸತ್ಕುಲೋದ್ಭವನಾದೆ ಸನ್ಮಾರ್ಗರಿಯಲಿಲ್ಲ –**
**ನಾರಾಯಣಾಯ ನಮೋ ನಾರಾಯಣ ।**
**ಸತ್ಕರ್ಮಗಳಿಗೆ ಬಹಿಷ್ಕೃತನಾಗಿ ಬಾಳುತಿಹೆ**
**ನಾರಾಯಣಾಯ ನಮೋ ನಾರಾಯಣ ॥ 38 ॥**

ಭಗವಂತ! ನಾನು ಸತ್ಕುಲದಲ್ಲಿ ಹುಟ್ಟಿ ಬಂದೆ ಆದರೆ ಸನ್ಮಾರ್ಗ ಯಾವುದು ತಿಳಿಯಲಿಲ್ಲ. ಸತ್ಕರ್ಮಗಳನ್ನು ಆಚರಿಸಬೇಕು. ಆದರೆ ಆ ಸತ್ಕರ್ಮಗಳಿಂದ ದೂರನಾಗಿ ಬಾಳುತ್ತಿದ್ದೇನೆ. ನಾರಾಯಣರೂಪೀ ಭಗವಂತ ನೀನೇ ರಕ್ಷಿಸಬೇಕು.

**ವಿವರಣೆ :** ಸತ್ಕುಲಪ್ರಸೂತನಾಗಿ ಸನ್ಮಾರ್ಗವನ್ನು ತಿಳಿದು ನಡೆಯುತ್ತಿರಬೇಕು.

ಸನ್ಮಾರ್ಗದಲ್ಲಿ ನಡೆಯುವದು ಅತೀ ಅವಶ್ಯವೇ ಆಗಿದೆ.

**ಸಾಧುಸೇವಾವಿಹೀನಸ್ಯ ದುಷ್ಟಸಂಗರತಸ್ಯಚ ।**
**ಸನ್ಮಾರ್ಗಪರಿಭ್ರಷ್ಟಸ್ಯ ಸದಾ ದುರ್ಮಾರ್ಗವರ್ತಿನಃ ।**
**ಸಂಸಾರೇ ಗಹ್ವರೇ ಪತ್ನೀ ಪುತ್ರಮಿತ್ರಾದಿದಸ್ಯುಭಿಃ ।**
**ವ್ಯಸನೇ ದಹ್ಯಮಾನಸ್ಯ ಪಾಶಬದ್ಧಸ್ಯ ಮೇ ಪಶೋಃ ।**
**ಅಪಸ್ಯತೋ ರಕ್ಷಮಾಣಂ ಕುರು ವೆಂಕಟರಕ್ಷಣಮ್ ॥** [106]

105. ಶ್ರೀಮದ್ ಭಾಗವತ – (6–8–13,14,20)
106. ಶ್ರೀವೆಂಕಟೇಶಸ್ತವರಾಜ – 32ನೆಯ ಶ್ಲೋಕ



ಸಾಧುಗಳ ಸೇವೆ ಮಾಡದಿರುವುದು, ದುಷ್ಟರ ಸಂಗದಲ್ಲಿ ರತನಾಗಿರುವುದು, ಸನ್ಮಾರ್ಗದಿಂದ ಭ್ರಷ್ಟನಾಗಿರುವುದು, ಯಾವಾಗಲೂ ದುರ್ಮಾರ್ಗದಲ್ಲಿ ಇರುವುದು, ಈ ಸಂಸಾರವೆಂಬ ಅರಣ್ಯದಲ್ಲಿ ಹೆಂಡತಿ, ಮಕ್ಕಳು ಮೊದಲಾದ (ಚೋರರಿಂದ) ಕಳ್ಳರಿಂದ ದುಃಖಪಡುವುದು, ಸಂಸಾರ ಪಾಶದಿಂದ ಕಟ್ಟಲ್ಪಟ್ಟು ಪಶುವಿನಂತೆ ಇರುವ ನನಗೆ ರಕ್ಷಕರಕಾಣೆ, ಹೇ ವೆಂಕಟೇಶ ನೀನು ನನ್ನನ್ನು ರಕ್ಷಣೆ ಮಾಡು.

ವೈಷ್ಣವ ಜನ್ಮ ಬಂದಾಗ ಸತ್ಕರ್ಮಗಳನ್ನು ಆಚರಿಸುವುದು, ಶ್ರೀವಿಷ್ಣು ಭಕ್ತಿ ಮಾಡುವುದು ಅವಶ್ಯವೇ.

ಶ್ರೀಮಧ್ವರು ದ್ವಾದಶಸ್ತೋತ್ರದಲ್ಲಿ ಹೇಳುತ್ತಾರೆ.

**ಕುರು ಭುಂಕ್ಷ ಚ ಕರ್ಮನಿಜಂ ನಿಯತಂ ॥**
**ಹರಿಪಾದ–ವಿನಮ್ರಧಿಯಾ ಸತತಮ್ ॥** [107]

ಶ್ರೀಹರಿಯ ಪಾದಕಮಲಗಳಲ್ಲಿ ವಿನಮ್ರ ಬುದ್ಧಿಯಿಂದ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಅನುಷ್ಠಾನ ಮಾಡು. ಸ್ವಯೋಗ್ಯವಾದ ಕರ್ಮಫಲವನ್ನು ಅನುಭವಿಸು.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥** [108]

ಈ ಲೋಕದಲ್ಲಿ ಸತ್ಕರ್ಮಗಳನ್ನು ಭಗವತ್ಪೂಜಾರೂಪವಾಗಿ ಮಾಡುತ್ತ ನೂರು ವರ್ಷಕಾಲ ಜೀವಿಸಲು ಬಯಸಬೇಕು. ಇದಲ್ಲದೇ ಬೇರೊಂದು ದಾರಿಯಿಲ್ಲ. ಇದರಿಂದ ಜೀವರಿಗೆ ಕರ್ಮದ ಲೇಪವಾಗುವದಿಲ್ಲ.

ಹಾಗಾಗಿ ಇಂಥ ಸತ್ಕರ್ಮಗಳನ್ನು ಆಚರಿಸದ ಬಾಳು ಹಾಳು ಎನ್ನುತ್ತಿದ್ದಾರೆ ಶ್ರೀದಾಸರು.

**ಒಂದು ಜಾವದ ತಪ್ಪನೆಂದೆಂದಿಗುಣಲಾರೆ**
**ನಾರಾಯಣಾಯ ನಮೋ ನಾರಾಯಣ ।**
**ವಂದಿಸುವೆ ಸಾಷ್ಟಾಂಗ ತ್ರಾಹಿತ್ರಾಹಿ ಪಾಹಿ ತ್ರಾಹಿ**
**ನಾರಾಯಣಾಯ ನಮೋ ನಾರಾಯಣ ॥ 39 ॥**

ಭಗವಂತ! ಒಂದು ಜಾವದಲ್ಲಿ ಮಾಡಿದ ತಪ್ಪನ್ನು, ಅದರ ಫಲವನ್ನು ಉಣ್ಣಲಾರೆ – ನಾನು ನಿನಗೆ ಸಾಷ್ಟಾಂಗ ನಮಸ್ಕಾರ ಮಾಡುವೆ ನನ್ನನ್ನು ರಕ್ಷಿಸು, ರಕ್ಷಿಸು, ರಕ್ಷಿಸು, ರಕ್ಷಿಸು.

**ವಿವರಣೆ : ಒಂದು ಜಾವದಲ್ಲಿ ಮಾಡಿದ ತಪ್ಪನ್ನು, ಅದರ ಫಲವನ್ನು ಉಣ್ಣಲಾರೆ – ಎಂದಿದ್ದಾರೆ.**

ಶ್ರೀಪ್ರಸನ್ನವೆಂಕಟದಾಸರೇ ತಮ್ಮ

---

107. ಶ್ರೀದ್ವಾದಶಸ್ತೋತ್ರ ಅಧ್ಯಾಯ 3 ಶ್ಲೋಕ 1.

108. ಈಶಾವಾಸ್ಯೋಪನಿಷತ್ – 2ನೇಯ ಮಂತ್ರ.



**ನೀ ಕರುಣಿಸೋ ವಿಠ್ಠಲಾ ನಮ । ಸಾಕೋ ಪಂಢರಿವಿಠ್ಠಲಾ ।**

**ಪದ್ಯದಲ್ಲಿ – ಜಾವಕೆ ಮಾಡುವೆ ಸಾವಿರತಪ್ಪನು ಕಾಯೋ ದಯಾಂಬುಧೆ ವಿಠ್ಠಲಾ।**
**ಶ್ರೀವರ ಪ್ರಸನ್ನ ವೆಂಕಟವಿಠ್ಠಲ ಜೀವಕೆ ಹೊಣೆ ನೀ ವಿಠ್ಠಲಾ ॥** ಎಂದಿದ್ದಾರೆ.

ಭಗವಂತ! ನಾನು ಪ್ರತಿದಿನ ಪ್ರಾತಃಕಾಲದಲ್ಲಿ ಸಾವಿರ ತಪ್ಪುಗಳನ್ನು ಮಾಡುತ್ತೇನೆ. ನೀನು ದಯಾಸಮುದ್ರ. ನೀನೇ ನನ್ನನ್ನು ರಕ್ಷಿಸು.

ಒಂದು ಜಾವದಲ್ಲಿ ಮಾಡಿದ ತಪ್ಪಿನ ಫಲವನ್ನು ಉಣ್ಣಲಾರೆ ಹಾಗಿರುವಾಗ ಸಾವಿರ ತಪ್ಪುಗಳ ಫಲವನ್ನು ಉಣ್ಣುವದು ಅತೀ ಕಠಿಣವೇ ಸರಿ. ಕಾರಣ ಪ್ರಸನ್ನವೆಂಕಟವಿಠ್ಠಲನೇ ನೀನೇ ನನ್ನನ್ನು ರಕ್ಷಿಸು ಎಂದಿದ್ದಾರೆ.

ಅವರೇ ಇನ್ನೊಂದು ಪದ್ಯದಲ್ಲಿ ನಾವು ಮಾಡುವ ಮುಖ್ಯವಾದ ತಪ್ಪು ಯಾವದು? ಎಂಬುದನ್ನು "ತಪ್ಪುಗಳೆಲ್ಲ ಪರಿಹರಿಸುವ ನಮ್ಮಪ್ಪನಲ್ಲವೇ ನೀನು" ಪದ್ಯದಲ್ಲಿ–

"ಬೆಳಗಿನ ಜಾವದಿ ಹರಿ ನಿನ್ನ ಸ್ಮರಣೆಯ ಹಲುಬಿಕೊಳ್ಳದ ತಪ್ಪು" ಎಂದಾಗಿ ಹೇಳುತ್ತ ಪ್ರತಿದಿನ ಪ್ರಾತಃಕಾಲದಲ್ಲಿ ಎದ್ದ ಕೂಡಲೇ ಭಗವಂತನ ಸ್ಮರಣೆ ಮಾಡಬೇಕು ಎಂದಿದ್ದಾರೆ. ಇದಕ್ಕೆ ಕಾರಣ ಹೀಗಿದೆ– ಭಗವಂತ ಹೇಳಿದ ಮಾತು ಇಲ್ಲಿದೆ.

**ಉತ್ಥಾಯ ಅಪರರಾತ್ರಾಂತೇ ಪ್ರಯತಃ ಸುಸಮಾಹಿತಾಃ ।**
**ಸ್ಮರಂತಿ ಮಮ ರೂಪಾಣಿ ಮುಚ್ಯಂತೇ ತೇऽಂಹಸೋऽಖಿಲಾತ್ ॥** [109]

ರಾತ್ರಿಯ ಕೊನೆಯ ಯಾಮದಲ್ಲಿ (ಬೆಳಗಿನ ಜಾವದಲ್ಲಿ) ಯಾವ ಭಕ್ತರು ನಿದ್ರೆಯಿಂದ ಎಚ್ಚತ್ತು ನನ್ನ ರೂಪಗಳನ್ನು, ನಾಮಗಳನ್ನು ಸ್ಮರಿಸುವರೋ ಅವರು ಸಮಸ್ತ ಪಾಪಗಳಿಂದ ಮುಕ್ತರಾಗುತ್ತಾರೆ.

**ವಂದಿಸುವೆ ಸಾಷ್ಟಾಂಗ ತ್ರಾಹಿ ತ್ರಾಹಿ ಪಾಹಿ ತ್ರಾಹಿ –**

ಭಗವಂತನೇ ನಾನು ಮಾಡಿರುವ ತಪ್ಪುಗಳಿಗೆ ಲೆಕ್ಕವೇ ಇಲ್ಲ. ನಾನು ನಿನಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡುವೆ ನನ್ನನ್ನು ರಕ್ಷಿಸು, ರಕ್ಷಿಸು, ರಕ್ಷಿಸು, ರಕ್ಷಿಸು.

ಶ್ರೀದಾಸರು ಭಗವಂತನಿಗೆ ನಮಸ್ಕಾರ ಮಾಡುತ್ತೇನೆಂದು ಹೇಳುತ್ತಿದ್ದಾರೆ. ಇದರ ವೈಶಿಷ್ಟ್ಯ ಹೀಗಿದೆ.

**ಏಕೋऽಪಿಕೃಷ್ಣಸ್ಯ ಕೃತಃ ಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ ।**
**ದಶಾಶ್ವಮೇಧೀ ಪುನರೇತಿಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥** [110]

ಶ್ರೀಕೃಷ್ಣನಿಗೆ ಭಕ್ತಿಯಿಂದ ಮಾಡಿದ ಒಂದು ನಮಸ್ಕಾರವು ಹತ್ತು ಅಶ್ವಮೇಧಯಾಗಗಳಿಗೆ ಸಮವೆನಿಸುತ್ತದೆ. ಆದರೆ ಹತ್ತು ಅಶ್ವಮೇಧಯಾಗ ಮಾಡಿದವನು ಮತ್ತೆ ಜನ್ಮ ಪಡೆಯುತ್ತಾನೆ.

---

109. ಶ್ರೀಮದ್ ಭಾಗವತ (8–4–24)

110. ಶ್ರೀಮನ್ಮಹಾಭಾರತ ಶಾಂತಿಪರ್ವ (ಭೀಷ್ಮಸ್ತವರಾಜಃ) 91ನೆ ಶ್ಲೋಕ



ಶ್ರೀಕೃಷ್ಣನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದವನು ಇನ್ನೊಮ್ಮೆ ಸಂಸಾರಕ್ಕೆ ಹುಟ್ಟಿಬರುವುದೇ ಇಲ್ಲ. ಶ್ರೀಕೃಷ್ಣರೂಪೀ ನಾರಾಯಣನಿಗೆ ನಮಸ್ಕಾರವು.

**ಮಧ್ವೇಶ ಮಧ್ವಪ್ರಿಯ ಮಧ್ವಮತ ಪರಿಪಾಲ ।**
**ನಾರಾಯಣಾಯ ನಮೋ ನಾರಾಯಣ**
**ಮಧ್ವಗುರುಸ್ತುತ್ಯ ಮಧ್ವಾರ್ಚಿತ ಪದಾಬ್ಜಹರಿ ॥**
**ನಾರಾಯಣಾಯ ನಮೋ ನಾರಾಯಣ ॥ 40 ॥**

ಹೇ ಭಗವಂತ ! ನೀನು ಶ್ರೀಮಧ್ವರಿಗೆ ಈಶ ಸ್ವಾಮಿಯು. ಶ್ರೀಮಧ್ವರಿಗೆ ಪ್ರಿಯನು, ಮಧ್ವಮತವನ್ನು ಪರಿಪಾಲಿಸುವವನು. ಶ್ರೀಮಧ್ವಗುರುಗಳಿಂದ ಸ್ತುತ್ಯನಾದವನು. ಶ್ರೀಮಧ್ವರಿಂದ ಅರ್ಚಿತವಾದ ಪಾದಕಮಲವುಳ್ಳನು. ಇಂಥ ಶ್ರೀನಾರಾಯಣನಿಗೆ ನಮಸ್ಕಾರವು.

**ವಿವರಣೆ : ಶ್ರೀನಾರಾಯಣನು ಶ್ರೀಮಧ್ವರಿಗೆ ಈಶ ಅಂದರೆ ಸ್ವಾಮಿಯಾಗಿದ್ದಾನೆ.**

**ಮಂದಹಾಸಮೃದುಸುಂದರಾನನಂ ವಂದನೀಯಮಭಿವಂದ್ಯಸತ್ಪತಿಮ್ ।**
**ಪ್ರಾಜ್ಞಮೌಲಿಮಣಿರಭ್ಯನುಜ್ಞಯಾ ತಸ್ಯತಾವದಗಮನ್ಮಹಾಮತಿಃ ॥** [111]

ಜ್ಞಾನಿಶಿರೋಮಣಿಗಳಾದ ಶ್ರೀಮಧ್ವರು ಕಿರುನಗೆ ಸೂಸುವ ಕೋಮಲವೂ, ಸುಂದರವೂ ಆದ ಮುಖವುಳ್ಳ, ಸರ್ವರೀತಿಯಲ್ಲೂ ವಂದನೆಗೆ ಅರ್ಹರಾದ, ಸ್ವಾಮಿಯಾದ ಶ್ರೀನಾರಾಯಣಾಭಿನ್ನ ಶ್ರೀವೇದವ್ಯಾಸರನ್ನು ನಮಸ್ಕರಿಸಿ ಅವರ ಅನುಮತಿ ಪಡೆದುಕೊಂಡು ಅಲ್ಲಿಂದ ಹೊರಟರು.

**ಶ್ರೀಮಧ್ವವಲ್ಲಭ ವೇದ ಪತೇ ಜಯ ನರಸಿಂಹಾ ಜಯನರಸಿಂಹಾ ಜಯನಾರಾಯಣ ।** ಎಂಬುದಾಗಿ "ಶ್ರೀ ನೃಸಿಂಹಗೀತೆ'ಯಲ್ಲಿ ವರ್ಣಿಸಿದಂತೆ ಶ್ರೀ ನಾರಾಯಣನು ಶ್ರೀಮಧ್ವರಿಗೆ ಸ್ವಾಮಿಯಾಗಿದ್ದಾನೆ.

ಶ್ರೀ ನಾರಾಯಣನು ಶ್ರೀಮಧ್ವರಿಗೆ ಪ್ರಿಯನಾಗಿದ್ದಾನೆ.

**ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ ।**
**ಪ್ರೇಯಸೇ ಮೇ ಸುಪೂರ್ಣಾಯ ನಮೋ ನಾರಾಯಣಾಯತೇ ॥** [112]

ಸ್ವತಂತ್ರನಾದ, ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾದ, ನಿರ್ದೋಷ ಗುಣಪೂರ್ಣ ಸ್ವರೂಪನಾದ, ಅತ್ಯಂತ ಪೂರ್ಣನಾದ ನಾರಾಯಣನಾದ, ನನಗೆ ಅತಿಪ್ರಿಯನಾದ ನಿನಗೆ ನಮಸ್ಕಾರವು.

**ನಮೋ ನಾರಾಯಣಾಯಾಜ ಭವ ಶಕ್ರೋಷ್ಣರುಜ್ ಮುಖ್ಯೈಃ ।**
**ಸದಾವಂದಿತಪಾದಾಯ ಶ್ರೀಶಾಯ ಪ್ರೇಯಸೇಽಧಿಕಮ್ ॥** [113]

111. ಶ್ರೀಮತ್‌ಸುಮಧ್ವವಿಜಯ (9–3)
112. ಶ್ರೀಮದ್ವಿಷ್ಣುತತ್ವವಿನಿರ್ಣಯ – ಅಂತ್ಯ ಶ್ಲೋಕ.
113. ಶ್ರೀಕರ್ಮನಿರ್ಣಯ – ಅಂತ್ಯ ಶ್ಲೋಕ.



ಬ್ರಹ್ಮ, ರುದ್ರ, ಇಂದ್ರ, ಸೂರ್ಯ ಮೊದಲಾದ ದೇವತೆಗಳಿಂದ ಸರ್ವದಾ ವಂದ್ಯವಾದ ಪಾದವುಳ್ಳ, ಲಕ್ಷ್ಮೀಪತಿಯಾದ, ನನಗೆ ಅತ್ಯಂತ ಪ್ರಿಯನಾದ ನಾರಾಯಣನಿಗೆ ನಮಸ್ಕಾರವು.

ಮಧ್ವಮತಪರಿಪಾಲನು ಶ್ರೀನಾರಾಯಣನಾಗಿದ್ದಾನೆ.

ಶ್ರೀದಾಸಶ್ರೇಷ್ಠ ಪುರಂದರದಾಸರು ತಮ್ಮ ಕೃತಿಯೊಂದರಲ್ಲಿ–

ಹನುಮನ ಮತವೇ ಹರಿಯ ಮತವು ಎಂಬುದಾಗಿ ತಿಳಿಸಿರುವುದನ್ನು ಇಲ್ಲಿ ಗಮನಿಸಬೇಕು.

ಅಷ್ಟೇ ಅಲ್ಲ ಶ್ರೀಮಧ್ವರು ರಚಿಸಿದ ಗ್ರಂಥಗಳು ಶ್ರೀನಾರಾಯಣನಿಗೆ ಪ್ರೀತಿ ಪಾತ್ರವಾಗಿವೆ. ಶ್ರೀಮಧ್ವಾಚಾರ್ಯರು ಗೀತಾಭಾಷ್ಯವನ್ನು ರಚಿಸಿ ಶ್ರೀವೇದವ್ಯಾಸರಿಗೆ ಅರ್ಪಿಸಿದರು. ಆ ರಾತ್ರಿ ಅಲ್ಲಿಗೆ ಬಂದ ಶ್ರೀನಾರಾಯಣದೇವರು ಭೂಮಿಯನ್ನು ಬಡಿದು ಶಬ್ದ ಮಾಡಿ 'ಇನ್ನೊಮ್ಮೆ ಅದರ ಪ್ರವಚನ ಮಾಡಿ' ಎಂದರು. ಇದರಿಂದ ಶ್ರೀಮಧ್ವರ ಭಾಷ್ಯಾದಿ ಗ್ರಂಥಗಳು ಶ್ರೀನಾರಾಯಣದೇವರ ಮೆಚ್ಚುಗೆಗೆ ಪಾತ್ರವಾಗಿದ್ದವು ಎಂಬುದು ತಿಳಿದುಬರುತ್ತದೆ. ಹಾಗಾಗಿ ಶ್ರೀನಾರಾಯಣನು ಮಧ್ವಮತ ಪರಿಪಾಲನಾಗಿದ್ದಾನೆಂದು ಹೇಳುವದು–ಔಚಿತ್ಯಪೂರ್ಣವಾಗಿದೆ

ಮಧ್ವಗುರುಗಳಿಂದ ಸ್ತುತ್ಯರು ಶ್ರೀನಾರಾಯಣದೇವರಾಗಿದ್ದಾರೆ–

**ಅಶೇಷಮಾನಮೇಯೈಕಸಾಕ್ಷಿಣೇಽಕ್ಷಯಮೂರ್ತಯೇ ।**
**ಅಜೇಶ ಪುರುಹೂತೇಡ್ಯ ನಮೋ ನಾರಾಯಣಾಯ ತೇ ॥** [114]

ಬ್ರಹ್ಮ–ರುದ್ರ–ಇಂದ್ರರಿಂದ ಸ್ತುತ್ಯನೇ! ಅಶೇಷ ಪ್ರಮಾಣ, ಪ್ರಮೇಯಗಳಿಗೆ ಮುಖ್ಯ ಸಾಕ್ಷಿಯಾದ, ನಾಶರಹಿತ ಶರೀರವುಳ್ಳ ನಾರಾಯಣನಾದ ನಿನಗೆ ನಮಸ್ಕಾರವು.

ಶ್ರೀಮಧ್ವರು ಭಾವೀಬ್ರಹ್ಮರು. ಅವರಿಂದ ಸ್ತುತ್ಯನಾದವನು ನಾರಾಯಣ.

**ನಿಜಪೂರ್ಣಸುಖಾಮಿತಬೋಧತನುಃ**
**ಪರಶಕ್ತಿರನಂತಗುಣಃಪರಮಃ ।**
**ಅಜರಾಮರಣಃ ಸಕಲಾರ್ತಿಹರಃ**
**ಕಮಲಾಪತಿರೀಡ್ಯತಮೋಽವತುನಃ ॥** [115]

ಸ್ವಾಭಾವಿಕಗಳಾದ ತುಂಬು ಸಂತೋಷ, ಮಿತಿ ಇರದ ಜ್ಞಾನವೇ ಶರೀರವಾಗಿವುಳ್ಳವನು, ವಿಲಕ್ಷಣವೂ, ಉತ್ತಮವೂ ಆದ ಸಾಮರ್ಥ್ಯವುಳ್ಳವನು, ಅನಂತಗುಣ ಪರಿಪೂರ್ಣನು, ಸರ್ವೋತ್ತಮನು, ಮುಪ್ಪು, ಸಾವುಗಳಿಲ್ಲದವನು, ಎಲ್ಲರ ದುಃಖ ಪರಿಹಾರಕನು, ಅತ್ಯಂತ ಸ್ತುತ್ಯನು ಇಂಥ ಲಕ್ಷ್ಮೀಪತಿಯು ನಮ್ಮನ್ನು ಕಾಪಾಡಲಿ.

ಶ್ರೀಮಧ್ವರಿಂದ ಪೂಜಿತ ಪಾದಕಮಲವುಳ್ಳವನು ಶ್ರೀಹರಿಯಾಗಿದ್ದಾನೆ–

114. ಪ್ರಮಾಣಲಕ್ಷಣ – ಅಂತ್ಯ ಶ್ಲೋಕ.

115. ಶ್ರೀದ್ವಾದಶಸ್ತೋತ್ರ – (4–1)



**ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ**
**ಪ್ರಚ್ಯುತೋऽಶೇಷದೋಷೈಃ ಸದಾ ಪೂರ್ತಿತಃ ।**
**ಉಚ್ಯತೇ ಸರ್ವವೇದೋರುವಾದೈರಜಃ**
**ಸ್ವರ್ಚಿತೋ ಬ್ರಹ್ಮರುದ್ರೇಂದ್ರಪೂರ್ವೈಃ ಸದಾ ॥** [116]

ನಿತ್ಯದಲ್ಲಿ ಎಲ್ಲ ಗುಣಗಳಿಂದ ತುಂಬಿದ, ಯಾವ ದೋಷವೂ ಇಲ್ಲದ, ಗುಣ ಪೂರ್ಣನಾದ, ಶ್ರೇಷ್ಠಗಳಾದ ವೇದಗಳಿಂದ ವಾಚ್ಯನಾದ, ಹುಟ್ಟು ಇಲ್ಲದ, ಬ್ರಹ್ಮರುದ್ರಾದಿಗಳಿಂದ ಪೂಜಿತನು ಇವನಾಗಿದ್ದಾನೆ.

**ಶ್ರೀ ಮಧ್ವನಾಥ ಕರಾರ್ಚಿತ ಪಾದಯುಗಾಬ್ಜ ಜಯಾಖಿಲವಿಘ್ನಹರ –**

ಎಂಬುದಾಗಿ "ನೃಸಿಂಹಗೀತೆ"ಯಲ್ಲಿ ವರ್ಣಿಸಿರುವುದು ಗಮನಾರ್ಹವಾಗಿದೆ.

**ಇಂಥ ನಾರಾಯಣನಿಗೆ ನಮಸ್ಕಾರವು**

**ಏನರಿಯದವ ನಾನು ನೀನೆ ಪರಗತಿ ಎನಗೆ**
**ನಾರಾಯಣಾಯ ನಮೋ ನಾರಾಯಣ ।**
**ಪ್ರಾಣನಿನಗರ್ಪಿಸಿದೆ ಪ್ರಸನ್ನವೆಂಕಟಕೃಷ್ಣ**
**ನಾರಾಯಣಾಯ ನಮೋ ನಾರಾಯಣ ॥ 41 ॥**

ನಾನು ಏನೂ ಅರಿಯದವ (ತಿಳಿಯದವ) ನನಗೆ ನೀನೆ ಪರಗತಿಯಾಗಿರುವೆ. ನನ್ನ ಪ್ರಾಣವನ್ನು ನಿನಗೆ ಅರ್ಪಿಸಿರುವೆ. ಪ್ರಸನ್ನವೆಂಕಟಕೃಷ್ಣರೂಪೀ ನಾರಾಯಣನೇ ನಿನಗೆ ನಮಸ್ಕಾರವು.[117]

**ಏನರಿಯದವನಾನು ನೀನೆ ಪರಗತಿ ಎನಗೆ –**

ಭಗವಂತ ನಾನು ಏನನ್ನೂ ಅರಿಯೆ. ಭಗವಂತ ನಿನ್ನನ್ನು ಯಾರೂ ಸಾಕಲ್ಯೇನ ತಿಳಿಯಲಾರರು. ಅಂಥದರಲ್ಲಿ ನಾನೇನು ತಿಳಿಯಲು ಸಾಧ್ಯ. ಸಾಧ್ಯವಿಲ್ಲವೆಂಬುದು ಸರ್ವರ ಅನುಭವ ಕೂಡ. ಇನ್ನು ನನಗೆ ನೀನೆ ಪರಗತಿಯಾಗಿರುವಿ. ನೀನೇ ನನ್ನನ್ನು ರಕ್ಷಿಸಬೇಕು.

**ಅವ್ಯಕ್ತೋऽಕ್ಷರ ಇತ್ಯುಕ್ತ ಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥** [118]

ನಾಶ ಹೊಂದದಿರುವುದರಿಂದ ಅವ್ಯಕ್ತನಾದ ಭಗವಂತನನ್ನು –

**ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ಸಂತಮ್ ।**

---

116. ಶ್ರೀದ್ವಾದಶಸ್ತೋತ್ರ – (8–8)
117. ಶ್ರೀಪ್ರಸನ್ನವೆಂಕಟದಾಸರು – ಶ್ರೀಧ್ರುವರಾಜಕಾಖಂಡಕಿ – ಅವರಿಂದ ಸಂಪಾದಿತ ಸೆಪ್ಟೆಂಬರ್ 88 ಪ್ರಕಟಿತ. ಈ ಕೃತಿಯಿಂದ ಪ್ರಸ್ತುತ ನುಡಿಯನ್ನು ಆಯ್ದುಕೊಳ್ಳಲಾಗಿದೆ. (ಸಮಗ್ರದಾಸಸಾಹಿತ್ಯ ಸಂಪುಟ 8 ಪುಟ 102ರಲ್ಲಿ ಇರುವ 41ನೆಯ ನುಡಿ ಅಪೂರ್ಣವಾಗಿದೆ)
118. ಶ್ರೀಭಗವದ್ಗೀತಾ (8–21)



ಎಂದು ಮುಂತಾದ ಶ್ರುತಿಗಳು ಅಕ್ಷರನೆಂದು ಕರೆಯುತ್ತವೆ. ಅವನನ್ನೇ "ಪರಗತಿ" ಎಂದು ಕರೆಯುತ್ತಾರೆ. ಏಕೆಂದರೆ ಅವನನ್ನು ಹೊಂದಿದ ಬಳಿಕ ಯಾರೂ ಹಿಂತಿರುಗಿ ಸಂಸಾರಕ್ಕೆ ಬರುವುದಿಲ್ಲ. ಅದೇ ನನ್ನ ಉತ್ತಮವಾದ ಸ್ವರೂಪವೆಂಬುದಾಗಿ ಭಗವಂತನೇ ತಿಳಿಸಿದ್ದಾನೆ.

ನಾಹಂ ಜಾನೇ ನ ಜಾನೇಽಹಂ ನ ಜಾನೇ ಗತಿಮನ್ಯಥಾ । ಶ್ರೀರಾಮಾಮೃತಮಹಾರ್ಣವ ನಾನು ತಿಳಿಯೆ, ಸರ್ವಥಾತಿಳಿಯೆ, ನಿನ್ನ ಬಿಟ್ಟು ಬೇರೊಂದು ಗತಿ ನನಗೆ ತಿಳಿಯದು. **ಹಾಗೂ ನ ಹರೇಃ ಸದೃಶಃ ಕಶ್ಚಿತ್ ನ ಹರೇಃ ಸದೃಶೀಗತಿಃ । ಶ್ರೀರಾಮಾಮೃತ ಮಹಾರ್ಣವ**

ಶ್ರೀಹರಿಗೆ ಸಮಾನನಾದವನು ಬೇರಾರೂ ಇಲ್ಲ. ಶ್ರೀಹರಿಯಂತಹ ಗತಿಯೂ ಬೇರೊಂದಿಲ್ಲ. ಈ ನುಡಿಗಳು ಇಲ್ಲಿ ಗಮನಾರ್ಹ.

**ಪ್ರಾಣನಿನಗರ್ಪಿಸಿದೆ ಪ್ರಸನ್ನವೆಂಕಟಕೃಷ್ಣ –**

ಪ್ರತಿಯೊಬ್ಬರೂ ಭಗವಂತ ಕೊಟ್ಟಿರುವ ಎಲ್ಲ ವಸ್ತುಗಳನ್ನು ಅವನಿಗೆ ಅರ್ಪಿಸ ಬೇಕಾದುದು ಅತೀ ಅವಶ್ಯ. ಆ ಕಾರಣದಿಂದ "ಪ್ರಾಣ"ವನ್ನು ಹೇ ಪ್ರಸನ್ನವೆಂಕಟಕೃಷ್ಣ ನಿನಗೆ ಅರ್ಪಿಸಿದ್ದೇನೆ ಎಂಬುದಾಗಿ ಶ್ರೀಪ್ರಸನ್ನವೆಂಕಟದಾಸರು ಹೇಳುತ್ತಿದ್ದಾರೆ.

**ಶ್ರೀಮದ್ ಭಾಗವತದ ಈ ಮಾತು ಇಲ್ಲಿ ಮನನೀಯ–**
**ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ॥ (2–4–17)**

ಭಗವಂತನಿಗೆ ಎಲ್ಲವನ್ನೂ ಸಮರ್ಪಿಸಬೇಕು. ಒಂದು ವೇಳೆ ಭಗವದರ್ಪಣ ಬುದ್ಧಿ ರಹಿತರಾದರೆ ಆಜೀವರು ಮುಕ್ತಿಯನ್ನು ಹೊಂದುವದೇ ಇಲ್ಲ.

ಶ್ರೀಮನ್ ಮಧ್ವಾಚಾರ್ಯರು ತಮ್ಮ ಸದಾಚಾರ ಸ್ಮೃತಿಗ್ರಂಥದಲ್ಲಿ ಹೀಗೆ ಹೇಳುತ್ತಾರೆ.

**ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ ।**
**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈಸನ್ನಿವೇದಯೇತ್ ॥ 12ನೆ ಶ್ಲೋಕ**

ಯಜ್ಞ, ದಾನ, ಹೋಮಿಸಿರುವುದು, ಜಪ, ಸರೋವರಾದಿನಿರ್ಮಾಣ, ತನಗೆ ಪ್ರಿಯವಾದ ಸಂಪತ್ತು, ಹೆಂಡತಿ, ಮಕ್ಕಳು, ಪ್ರಾಣ ಹಾಗೂ ಇಂದ್ರಿಯಗಳಿಂದ ನಡೆಯುವ ಸರ್ವ ಕಾರ್ಯಗಳನ್ನು ಶ್ರೀಹರಿಗೆ ಸಮರ್ಪಿಸಬೇಕು.

ಈ ಕಾರಣದಿಂದ ಶ್ರೀಪ್ರಸನ್ನವೆಂಕಟದಾಸರು ತಮ್ಮ ಆರಾಧ್ಯಮೂರ್ತಿಯಾದ ಪ್ರಸನ್ನವೆಂಕಟಕೃಷ್ಣನಿಗೆ "ಪ್ರಾಣ"ವನ್ನೂ ನಿನಗೆ ಅರ್ಪಿಸಿದ್ದೇನೆ ಎಂಬುದಾಗಿ ಹೇಳುವ ಮಾತು ತುಂಬಾ ಔಚಿತ್ಯಪೂರ್ಣವಾಗಿದೆ.

**– ಶ್ರೀಮಧ್ವೇಶಾರ್ಪಣಮಸ್ತು –**



## ಗ್ರಂಥಋಣ


| | | |
|---|---|---|
| 1. | ಶ್ರೀಮದ್ ಭಾಗವತ | ಶ್ರೀವೇದವ್ಯಾಸರು |
| 2. | ಶ್ರೀ ಮಹಾಭಾರತ ತಾತ್ಪರ್ಯನಿರ್ಣಯ (ಕನ್ನಡಾನುವಾದ) | ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು |
| 3. | ಶ್ರೀಹರಿಕಥಾಮೃತಸಾರ (ಅನುವಾದ) | ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು |
| 4. | ಸಮಗ್ರ ದಾಸಸಾಹಿತ್ಯ | ಕನ್ನಡ ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು |
| 5. | ಶ್ರೀಪ್ರಸನ್ನವೆಂಕಟದಾಸರು | ಶ್ರೀಧ್ರುವರಾಜ ಕಾಖಂಡಕಿ |
| 6. | ಶ್ರೀಕೃಷ್ಣಾಮೃತ ಮಹಾರ್ಣವ (ಕನ್ನಡಾನುವಾದ) | ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು |
| 7. | ದಾಸ ಸಾಹಿತ್ಯ ಹಿನ್ನೆಲೆ | ಶ್ರೀನಿವಾಸ ಸು.ಮಠದ |
| 8. | ಶ್ರೀ ವಿಷ್ಣು ಸಹಸ್ರನಾಮ (4 ಸಂಪುಟಗಳು) | ಶ್ರೀ ಪಲಿಮಾರು ಮಠ ಉಡುಪಿ ಪ್ರಕಟಿತ |
| 9. | ಸುಲಲಿತಂ ಶ್ರೀಮದ್ ಭಾಗವತಮ್ | ಶ್ರೀ ಪಂ॥ ಕೆ. ಹಯವದನ ಪುರಾಣಿಕ (ಶ್ರೀಭಾಗವತಾಶ್ರಮ ಪ್ರತಿಷ್ಠಾನ, ಭಂಡಾರಕೇರಿಮಠ) |
| 10. | ಶ್ರೀಸರ್ವಮೂಲಗ್ರಂಥಗಳು | ಅಖಿಲ ಭಾರತ ಮಾಧ್ವಮಹಾಮಂಡಲ ಬೆಂಗಳೂರು |
| 11. | ಶ್ರೀ ವೈಕುಂಠವರ್ಣನೆ ಸಾರಸಂಗ್ರಹ | ಶ್ರೀನಿವಾಸ, ಸು. ಮಠದ |
| 12. | ಶ್ರೀಪ್ರಾತಃ ಸಂಕಲ್ಪಗದ್ಯ | ಶ್ರೀರಾಘವೇಂದ್ರತೀರ್ಥರು |
| 13. | ಶ್ರೀಆದಿತ್ಯ ಪುರಾಣವೆಂಕಟೇಶ ಮಹಾತ್ಮೆ (ಕನ್ನಡಾನುವಾದ) | ಶ್ರೀವಿದ್ವಾನ್ ಶ್ರೀರಾಮವಿಟ್ಠಲಾಚಾರ್ಯರು |
| 14. | ಬಿಂಬಾನುಸಂಧಾನ | ಶ್ರೀ ಎಮ್.ಎಸ್. ಆನಂದರಾವ್ ಬೆಂಗಳೂರು |
| 15. | ತತ್ವ ಸುವ್ವಾಲಿ | ಶ್ರೀಜಗನ್ನಾಥದಾಸರು |
| 16. | ಶ್ರೀಮಹಾಭಾರತತಾತ್ಪರ್ಯ ನಿರ್ಣಯ (ಸಂಸ್ಕೃತ ಆವೃತ್ತಿ) | ಶ್ರೀ ವಿಶ್ವಮಹಾಪರಿಷತ್ ಬೆಂಗಳೂರು ಪ್ರಕಟಿತ (ದ್ವಿತೀಯ ಭಾಗ) |
| 17. | ಶ್ರೀನಾರಾಯಣ ಶಬ್ದಾರ್ಥ | ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರು |
| 18. | ಸ್ತವರಾಜ ಸ್ತೋತ್ರಮಂಜರೀ | ಶ್ರೀನಿವಾಸ ಸು. ಮಠದ |
| 19. | ಜಿತಂತೇ ಸ್ತೋತ್ರ (ಕನ್ನಡಾನುವಾದ) | ಶ್ರೀ ಪಂ॥ ಕೆ.ಜಿ. ಕಲಕೋಟಿ |
| 20. | ಅಷ್ಟೋತ್ತರ ಶತನಾಮಸ್ತೋತ್ರ ಮಂಜರೀ | ಶ್ರೀನಿವಾಸ ಸು. ಮಠದ |






ವಿದ್ವಾನ್ ಶ್ರೀನಿವಾಸ ಸು. ಮಠದ (ಬಿಜಾಪುರ) ಅವರ ಹೆಸರು ಆಧ್ಯಾತ್ಮದ, ಶಾಸ್ತ್ರಾಧ್ಯಯನದ ವಲಯದಲ್ಲಿ ಚಿರಪರಿಚಿತವಾದದ್ದು. ಅವರ ಅಪಾರ ಆಸಕ್ತಿ ಇದ್ದದ್ದು, ತಾವು ಓದಿ, ತಿಳಿದು, ಅಧ್ಯಯನ ಮಾಡಿ ಕಂಡುಂಡ ಆಧ್ಯಾತ್ಮದ, ಅಧ್ಯಯನದ ಸಾರವನ್ನು, ತಮ್ಮದೆ ವಿಶಿಷ್ಟವಾದ ಸತ್ವಯುತ ಲೇಖನಗಳಿಂದ ಅದನ್ನು ಸಾಮಾನ್ಯ ಜನಕ್ಕೂ ಕೂಡ ತಲುಪಿಸುವ ಜ್ಞಾನಯಜ್ಞ ಕಾರ್ಯವನ್ನು ಮಾಡಿ, ಅದರ ತೃಪ್ತಿಯನ್ನು ಪಡೆಯುವವರು.

ಬಿ.ಎಸ್.ಸಿ., ಎಮ್.ಎ. ಪದವಿಧರರಾಗಿ, ಅವರ ಲೌಕಿಕ ಬದುಕಿಗಾಗಿ, ಬ್ಯಾಂಕಿನಲ್ಲಿ ವೃತ್ತಿ ಮಾಡಿದ್ದರೂ, ಅವರು ಅಲೌಕೀಕ, ಆಧ್ಯಾತ್ಮದ, ಶಾಸ್ತ್ರ, ಪುರಾಣ, ಪ್ರವಚನ, ಪಠಣ, ಅಧ್ಯಯನ ಎಂಬ ಪ್ರವೃತ್ತಿ ಬದುಕಿಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿ ಕೊಂಡವರು. ಇವರು ವ್ಯಾಸ–ದಾಸ ಸಾಹಿತ್ಯದಲ್ಲಿ ಆಳವಾಗಿ ಗುರುಮುಖೇನ ಅಧ್ಯಯನ ಮಾಡಿ ಅಪಾರ ಪಾಂಡಿತ್ಯವನ್ನು ಪಡೆದುಕೊಂಡವರು. ಅಂತ್ಯಯೇ ಅವರ ಸತ್ವಪೂರ್ಣ, ತತ್ವಪೂರ್ಣ, ಸೈದ್ಧಾಂತಿಕ, ತರ್ಕದ ಎಲ್ಲ ಪ್ರಾಕಾರಗಳಲ್ಲಿ ಆಧ್ಯಾತ್ಮಿಕ ಪ್ರಪಂಚವನ್ನು ವಿವರಣೆಗೊಳ್ಳುವಂತೆ ಸುಮಾರು 100 ಗ್ರಂಥಗಳು ಅವರ ಲೇಖನಿಯಿಂದ ಹೊರಬಂದಿವೆ. ಇದೊಂದು ಅವರ ಮೇಲೆ ಅಪಾರವಾದ ಭಗವಂತನ ಕೃಪೆ. ಇಂಥ ಒಂದು ಕೃಪೆಯ ಸಂಕೇತವಾಗಿ "ನಾರಾಯಣ ಪಂಜರ"ವನ್ನು ದಾಸರು ಎಷ್ಟು ಅದ್ಭುತವಾಗಿ ರಚನೆ ಮಾಡಿದ್ದಾರೋ, ಅಷ್ಟೇ ಅಪೂರ್ವವಾಗಿ ಇದರ ಅರ್ಥ ವಿಶ್ಲೇಷಣೆ, ಪೌರಾಣಿಕ ಹಿನ್ನೆಲೆ ಹಾಗೂ ದಾಸರ ನುಡಿಗಳ ಧರ್ಮ ಮತ್ತು ಮರ್ಮಗಳನ್ನು ಲೇಖಕರಾದ ವಿದ್ವಾನ್ ಶ್ರೀನಿವಾಸ ಸು. ಮಠದ ಅವರು ಈ ಕೃತಿಯಲ್ಲಿ ಮೂಡಿಸಿದ್ದಾರೆ. ಇಂತಹ ಸಮರ್ಥ ಅರ್ಥ ವಿಶ್ಲೇಷಣೆ ಮಾಡುವದರ ಮೂಲಕ ಶ್ರೀನಿವಾಸ ಮಠದವರು ಪ್ರಸನ್ನ ವೆಂಕಟದಾಸರಿಗೆ ಶತಮಾನದ ಸೇವೆಸಲ್ಲಿಸಿದ್ದಾರೆ.

–ಪ್ರಕಾಶಕರು

ಪ್ರಸನ್ನವೆಂಕಟದಾಸರ "ನಾರಾಯಣ ಪಂಜರ" ಎಂಬ ಕೃತಿಯನ್ನು ಬಹಳ ಸುಂದರವಾಗಿ ವಿವರಿಸಿದ್ದಾರೆ. ರಾಮಾಯಣ, ಭಾಗವತ ಭಾರತಾದಿಗಳ ಪ್ರಸಂಗಗಳನ್ನು ವಿಸ್ತಾರವಾಗಿ ಸಾಧಾರವಾಗಿ ನಿರೂಪಿಸಿ ಓದುಗರಿಗೆ ಬಹಳ ಅನುಕೂಲ ಮಾಡಿದ್ದಾರೆ. ದಾಸರಕೃತಿಗಳನ್ನು ಹೀಗೆ ಅರ್ಥಾನುಸಂಧಾನ ಪೂರ್ವಕವಾಗಿ ಪಠಿಸಿದರೆ ಮಹಾಜ್ಞಾನ ಲಾಭ ಪುಣ್ಯಲಾಭಗಳಾಗುವವು. ಭಗವಂತನ ದಶಾವತಾರಗಳ ಹಾಗೂ ಇನ್ನಿತರ ರೂಪಗಳ ಮಹಿಮೆ ಹಾಗೂ ಉಪಕಾರಗಳನ್ನು ತಿಳಿಸುವ ಈ ಕೃತಿಯು ನಿಜವಾಗಿಯೂ ಬಹಳ ಉಪಯುಕ್ತವಾಗಿದೆ. ಇದರ ಲಾಭವನ್ನು ಸಜ್ಜನರು ಪಡೆಯಬೇಕು.

ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು, ಉತ್ತರಾದಿಮಠ

ರಾಮಾಯಣ ಭಾರತ ಭಾಗವತಗಳ ಸಮನ್ವಯ ಹಾಗೂ ಶಾಸ್ತ್ರೀಯ ವಿವೇಚನೆಯಿಂದ ಪ್ರಸನ್ನವೆಂಕಟದಾಸರು ರಚಿಸಿರುವ ನಾರಾಯಣ ಪಂಜರ ಕೃತಿಯ ಹೂರಣವನ್ನು ಈ ಕೃತಿಯಲ್ಲಿ ವಿದ್ವಾಂಸರಾದ ಶ್ರೀನಿವಾಸ ಮಠದ ಅವರು ಅರ್ಥಪೂರ್ಣವಾಗಿ ಓದುಗರ ಮುಂದಿ ಬಿಡಿಸಿಟ್ಟಿದ್ದಾರೆ. ಈಗಾಗಲೇ ದಾಸಸಾಹಿತ್ಯ ಕುರಿತಾದ ಅನೇಕ ಉಪಯುಕ್ತ ಗ್ರಂಥಗಳನ್ನು ಬರೆದಿರುವ ಶ್ರೀನಿವಾಸ ಮಠದ ಅವರು ಈ ಗ್ರಂಥದಲ್ಲಿ ನಾರಾಯಣ ಪಂಜರದ ಮರ್ಮಗಳನ್ನು ಅನುಸಂಧಾನಪೂರ್ವಕ ತೋರಿಸಿಕೊಡುತ್ತ ಅವುಗಳ ಅರ್ಥಗಳನ್ನು ಪಂಜರದಿಂದ ಬಿಡಿಸಿ ಹೊರತೆಗೆದುಕೊಟ್ಟಿದ್ದಾರೆ.

'ನಾರಾಯಣ ಪಂಜರ' ಕೃತಿ ಪ್ರಸನ್ನವೆಂಕಟದಾಸರು ಕಲಿಯುಗದ ಸಾಧಕರಿಗೆ, ಕನ್ನಡ ಬಲ್ಲ ಸಜ್ಜನರಿಗೆ, ಸಾಮಾನ್ಯರಿಗೆ ನೀಡಿರುವ ಈ ಕೃತಿ ಭಕ್ತಿಪ್ರಪಂಚದ ವಿಸ್ಮಯಗಳಿಗೆ ಪ್ರವೇಶದ್ವಾರ. ಈ ವಿಶೇಷ ಕೃತಿ ಮುಕ್ತಿಯ ದಾರಿಯನ್ನು ತೋರಿಸುವ ಕೈಮರ. ಶ್ರೀನಿವಾಸಮಠದವರ ಅರ್ಥವಿಶೇಷಗಳನ್ನು ಅರಗಿಸಿಕೊಂಡು ಈ ಹಾಡುಗಳನ್ನು ಮನನಮಾಡಿದಾಗ ಅಂತರಂಗದಲ್ಲಿ ಭಗವದ್ದರ್ಶನದ ಭಾವಾನುಭವ ಆಗುತ್ತದೆ.

ಪೌರಾಣಿಕದಲ್ಲಿರುವ ಒಂದೊಂದು ವೃತ್ತಾಂತವನ್ನೂ ಬೀಜರೂಪದಲ್ಲಿ ನಾರಾಯಣ ಪಂಜರವೆಂಬ ಈ ಅಮೃತಫಲದಲ್ಲಿ ಪ್ರಸನ್ನವೆಂಕಟದಾಸರು ಅಡಗಿಸಿಟ್ಟಿದ್ದರೆ, ಶ್ರೀನಿವಾಸಮಠದವರು, ಆ ಬೀಜಗಳನ್ನು ಬಿಡಿಸಿ, ಅವುಗಳ ಅಣಿಮುತ್ತು ಒಳಕಾಳುಗಳನ್ನು, ಆ ಮಾತಿನ ಹಿಂದೆ ಇರುವ ಕಥಾಮರ್ಮ ಹಾಗೂ ಧರ್ಮ ಸಂದೇಶಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಓದುಗರಿಗೆ ತಿಳಿಸಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಬಿಂದುವಿನಲ್ಲಿ ಸಿಂಧುವನ್ನು ಅಡಗಿಸುವ ಕಾವ್ಯಕೌಶಲ್ಯ ಪ್ರಸನ್ನವೆಂಕಟದಾಸರಲ್ಲಿ ಕಂಡರೆ, ಆ ಬಿಂದುವನ್ನು ಸಿಂಧುಶಯನನತ್ತ ಕರೆದೊಯ್ಯುವ ನಾವೆಯನ್ನಾಗಿ ಅರ್ಥವನ್ನು ಅರಳಿಸುವ ಪ್ರತಿಭೆ ಶ್ರೀನಿವಾಸಮಠದ ಅವರದಾಗಿದೆ.

ವಿದ್ಯಾವಾಚಸ್ಪತಿ ಡಾ॥ ಅರುಳಮಲ್ಲಿಗೆ ಪಾರ್ಥಸಾರಥಿ